KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಮೇ ೧೮, ೨೦೦೬ (ವೈಶಾಖ ೨೮, ಶಕವರ್ಷ ೧೯೨೮) | ಸಂಚಿಕೆ ೨೦ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

### ಅರಣ್ಯ ಇಲಾಖೆ

**ಅಧಿಸೂಚನೆ ಸಂಖ್ಯೆ:ಸಿ.ಸಿಆರ್–5–ಪಾ.ಚೀ.:2006–07, ದಿನಾಂಕ 5ನೇ ಮೇ 2006**

ಪಾಲಿಥೀನ್ ಚೀಲಗಳು/ಹಾಳೆಗಳು ಮತ್ತು ನೇಯ್ದು ಚೀಲಗಳನ್ನು ಸರಬರಾಜು ಮಾಡಲು ಅರ್ಹ ಉತ್ಪಾದಕರ/ಏಜೆನ್ಸಿ/ಸಂಸ್ಥೆಗಳ ಸಂಭಾವ್ಯ ಪಟ್ಟಿ ತಯಾರಿಸುವ ಬಗ್ಗೆ ಮತ್ತು ಪಾಲಿಥೀನ್ ಚೀಲಗಳು/ ಹಾಳೆಗಳಿಗೆ ಪ್ರತಿ ಟನ್‌ಗೆ ಮತ್ತು ನೇಯ್ದು ಚೀಲಗಳಿಗೆ ಒಂದು ಸಾವಿರದ ಸಂಖ್ಯೆಯಲ್ಲಿ ದರ ನಿಷ್ಕರ್ಷಿಸುವ ಬಗ್ಗೆ ಅರ್ಹತಾ ಪೂರ್ವ ಟೆಂಡರು.

ಕರ್ನಾಟಕ ಅರಣ್ಯ ಇಲಾಖೆಯು 2006–07ರ ಅರಣ್ಯ ನರ್ಸರಿ ಋತುವಿಗೆ 1.4.2006 ರಿಂದ 31.3.2007ರ ಮಧ್ಯದ ಅವಧಿಯಲ್ಲಿ ಪಾಲಿಥೀನ್ ಚೀಲಗಳನ್ನು, ಪಾಲಿಥೀನ್ ಹಾಳೆಗಳನ್ನು ಮತ್ತು ನೇಯ್ದು ಚೀಲಗಳನ್ನು ಸರಬರಾಜು ಮಾಡಲು ಭರವಸೆ ಹೊಂದಿದ / ಉತ್ಪಾದಕರ / ಏಜೆನ್ಸಿಗಳ / ಸಂಸ್ಥೆಗಳ ಸಂಭಾವ್ಯ ಪಟ್ಟಿಯನ್ನು ತಯಾರಿಸಲು ಉದ್ದೇಶಿಸಿರುವುದರಿಂದ, ಆಸಕ್ತ LDPE ಚೀಲ, HDPE ಹಾಳೆ ಮತ್ತು HDPE ನೇಯ್ದು ಚೀಲಗಳ ಉದ್ದಿಮೆ ಘಟಕಗಳ / ಉತ್ಪಾದಕರ / ಏಜೆನ್ಸಿಗಳ / ಸಂಸ್ಥೆಗಳ ಗಮನವನ್ನು ಈ ಪ್ರಕಟಣೆಯ ಮೂಲಕ ಸೆಳೆಯಲಾಗಿದೆ. ಹೆಚ್ಚಿನ ವಿವರಗಳನ್ನು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಇವರ ಕಚೇರಿಯಿಂದ ಪಡೆಯಬಹುದು ಅಥವಾ ವೆಬ್‌ಸೈಟ್ www.karnatakaforestdepartment.org ನಿಂದ ಡೌನ್‌ಲೋಡ್ ಮಾಡಿಕೊಳ್ಳಬಹುದು.

ಪಾಲಿಥೀನ್ ಚೀಲ / ಹಾಳೆಗಳಿಗೆ ಪ್ರತಿ ಟನ್‌ಗೆ ಮತ್ತು ನೇಯ್ದು ಚೀಲಗಳಿಗೆ ಒಂದು ಸಾವಿರ ಚೀಲಗಳಿಗೆ ಅನ್ವಯಿಸುವ ದರವನ್ನು ಸಂಭಾವ್ಯ ಪಟ್ಟಿಯಲ್ಲಿ ಸೇರ್ಪಡೆಯಾದವರಿಂದ, ತರುವಾಯ ದರ ಟೆಂಡರ್ ಸ್ವೀಕೃತಿಯ ಮೂಲಕ ನಿಷ್ಕರ್ಷಿಸಲಾಗುವುದು. ಸಫಲ ಟೆಂಡರ್‌ದಾರ/ರು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಗಳೊಂದಿಗೆ ಕರಾರುನಾಮೆಯನ್ನು ಮಾಡಿಕೊಳ್ಳತಕ್ಕದ್ದು, ನಿಷ್ಕರ್ಶಿಸಲಾದ ದರವು ಮಾರ್ಚಿ 2007ರ ಅಂತ್ಯದವರೆಗೆ ಚಾಲ್ತಿಯಲ್ಲಿ ಇರುತ್ತದೆ.

ಸರಬರಾಜು ಮಾಡಬೇಕಾದ ತಪಶೀಲು ವಿವರಗಳನ್ನು ಅನುಬಂಧ-1ರಲ್ಲಿ ನೀಡಲಾಗಿದೆ. ಆಯಾಯ ವಿಭಾಗಕ್ಕೆ ಹಂಚಿಕೆ ಮಾಡಲಾದ ಅನುದಾನ ಮತ್ತು ಅನುಮೋದಿತ ವಾರ್ಷಿಕ ಕ್ರಿಯಾ ಯೋಜನೆಯ ಅನುಸಾರ ಆಯಾಯ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು 2006-07 ರ ನರ್ಸರಿ ಋತುವಿಗೆ ಸಲ್ಲಿಸುವ ಬೇಡಿಕೆಯ ಪ್ರಮಾಣಕ್ಕೆ ಅನುಗುಣವಾಗಿ ಸರಬರಾಜನ್ನು ಮಾಡತಕ್ಕದ್ದು. ಯಾವುದೇ ವಿಭಾಗದಿಂದ ಬೇಡಿಕೆ ಪತ್ರ ಸ್ವೀಕೃತಿಯಾದ ಒಂದು ತಿಂಗಳ ಅವಧಿಯೊಳಗೆ ಅನುಮೋದಿತ ಗುಣಮಟ್ಟದ ಸಾಮಗ್ರಿಯನ್ನು ಸರಬರಾಜು ಮಾಡತಕ್ಕದ್ದು. ಸರಬರಾಜು ಮಾಡಲು ತಿಳಿಸಲಾಗುವ ಸಾಮಗ್ರಿಯನ್ನು ಅನುಬಂಧ-2ರಲ್ಲಿ ಪಟ್ಟಿ ಮಾಡಿದ ಆಯಾಯ ವಿಭಾಗಗಳ ಕೇಂದ್ರ ಸ್ಥಾನದಲ್ಲಿ ತಲುಪಿಸತಕ್ಕದ್ದು.

ಆಸಕ್ತಿ ಇರುವ ಸರಬರಾಜುದಾರರು ತಮ್ಮ ಆಸಕ್ತಿಯನ್ನು ದಿನಾಂಕ 19.6.2006 ಅಥವಾ ಅದಕ್ಕಿಂತ ಪೂರ್ವದಲ್ಲಿ ಈ ಕೆಳಗಿನ ವಿವರಗಳೊಂದಿಗೆ ಮೊಹರು ಮಾಡಿದ ಲಕೋಟೆಯಲ್ಲಿ ಸಲ್ಲಿಸಬಹುದು. ಪ್ರಸ್ತಾವನೆಗೆ, ಸಂಚಕಾರ ಹಣ ಠೇವಣಿಯಾಗಿ

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಹೆಸರಿನಲ್ಲಿ ರೂ.2,000-00 ಮೌಲ್ಯದ, ಬೆಂಗಳೂರಿನಲ್ಲಿ ನಗದೀಕರಿಸ ಬಹುದಾದಂತಹ ಡಿ.ಡಿ.ಯನ್ನು ಲಗತ್ತಿಸಿರತಕ್ಕದ್ದು. ಸಂಚಕಾರ ಹಣವನ್ನು ಹಿಂದಿರುಗಿಸಲಾಗುವುದಿಲ್ಲ.

ನಿಗದಿತ ನಮೂನೆಯಲ್ಲಿ ಇಲ್ಲದೇ ಇರುವ ಮತ್ತು ಸಂಚಕಾರ ಹಣ ಠೇವಣಿಯನ್ನು ಲಗತ್ತಿಸದೇ ಇರುವ ಆಸಕ್ತಿ ವ್ಯಕ್ತಪಡಿಸುವ ಪ್ರಸ್ತಾವನೆಯನ್ನು ತಿರಸ್ಕರಿಸಲಾಗುವುದು.

ಸಲ್ಲಿಸಬೇಕಾದ ವಿವರಗಳು:

1) ಸಕ್ಷಮ ಪ್ರಾಧಿಕಾರದಿಂದ ಉದ್ದಿಮೆ / ಸಂಸ್ಥೆ / ಏಜೆನ್ಸಿಯ ನೋಂದಣಿಯಾದ/ಮಾಲಿಕತ್ವದ ಧೃಡೀಕರಣ ಪತ್ರ.
2) ಉದ್ದಿಮೆ / ಸಂಸ್ಥೆ / ಏಜೆನ್ಸಿಯ ಕಚೇರಿಯ ಪೂರ್ಣ ಅಂಚೆ ವಿಳಾಸ, ದೂರವಾಣಿ ಸಂಖ್ಯೆ, ಫ್ಯಾಕ್ಸ್ ಸಂಖ್ಯೆ ಮತ್ತು ವಿದ್ಯುನ್ಮಾನ ಅಂಚೆ ಐಡಿ.
3) ಉದ್ದಿಮೆ ಘಟಕವನ್ನು ವಾಸ್ತವವಾಗಿ ಸ್ಥಾಪಿಸಲಾದ ಸ್ಥಳದ ವಿವರ, ಸಂಪೂರ್ಣ ಅಂಚೆ ವಿಳಾಸ, ದೂರವಾಣಿ ಸಂಖ್ಯೆ, ಫ್ಯಾಕ್ಸ್ ಸಂಖ್ಯೆ.
4) ಸಕ್ಷಮ ಪ್ರಾಧಿಕಾರದಿಂದ ಮೌಲ್ಯ ವರ್ಧಿತ ತೆರಿಗೆ (VAT) ಧೃಡೀಕರಣ ಪತ್ರ ಹಾಗೂ 2004-05 ಮತ್ತು 2005-06 ನೇ ಸಾಲಿನಲ್ಲಿ ಪಾವತಿಸಿದ ಮೌಲ್ಯ ವರ್ಧಿತ ತೆರಿಗೆ ಬಗ್ಗೆ ಧೃಡೀಕರಣ ಪತ್ರ.
5) 2004-05 ಅಥವಾ 2005-06 ರ ವರ್ಷಗಳಿಗೆ ಸಕ್ಷಮ ಪ್ರಾಧಿಕಾರದಿಂದ ಆದಾಯ ತೆರಿಗೆ ತೀರುವಳಿ ಮಾಡಿದ ಬಗ್ಗೆ ಧೃಡೀಕರಣ ಪತ್ರ.
6) ಉದ್ದಿಮೆಯಲ್ಲಿ ಉತ್ಪಾದಿಸಲಾಗುವ ಸಾಮಗ್ರಿಗಳ ವಿವರ ಮತ್ತು ತಾಂತ್ರಿಕ ಗುಣಮಟ್ಟಗಳ ತಪಶೀಲು, ಉದ್ದಿಮೆಯ ಸ್ಥಾಪಿತ ಸಾಮರ್ಥ್ಯ ಮತ್ತು ಅಳವಡಿಸಿಕೊಳ್ಳಲಾದ ತಾಂತ್ರಿಕತೆ ವಿವರ.
7) ಕಚ್ಚಾ ವಸ್ತುಗಳ ಮೂಲ, ಕಚ್ಚಾ ವಸ್ತುವನ್ನು ಪಡೆಯಲು ಉದ್ದಿಮೆಯು ಹೊಂದಿರುವ ಈಗಿನ ವ್ಯವಸ್ಥೆ, ಈ ಸಂಬಂಧ ಯಾವುದೇ ಇತಿಮಿತಿಗಳಿದ್ದರೆ, ಅವುಗಳ ವಿವರಣೆಯೊಂದಿಗೆ ಸಂಬಂಧಪಟ್ಟ ದಾಖಲೆಗಳನ್ನು ಲಗತ್ತಿಸುವುದು.
8) ಉದ್ದಿಮೆ / ಸಂಸ್ಥೆ / ಏಜೆನ್ಸಿಯ ಅಧಿಕೃತ ಬ್ಯಾಂಕು / ಗಳು, ಬ್ಯಾಂಕುಗಳ ಧೃಡೀಕರಣ ಪತ್ರದೊಂದಿಗೆ.
9) ಮೇಲಿನ ಸಾಮಗ್ರಿಗಳನ್ನು ಅಗತ್ಯಕ್ಕೆ ಅನುಗುಣವಾಗಿ ಉದ್ದಿಮೆ / ಸಂಸ್ಥೆ / ಏಜೆನ್ಸಿಯು ಯಾವ ಯಾವ ಅರಣ್ಯ ವಿಭಾಗಗಳಿಗೆ ಪರಿಣಾಮಕಾರಿಯಾಗಿ ಮತ್ತು ವ್ಯಾವಹಾರಿಕವಾಗಿ ಸರಬರಾಜು ಮಾಡಲು ಸಾಮರ್ಥ್ಯ ಹೊಂದಿದೆ, ವಿವರಗಳು.
10) ಉದ್ದಿಮೆ / ಸಂಸ್ಥೆ / ಏಜೆನ್ಸಿಯಲ್ಲಿನ ನೌಕರರ / ಕೆಲಸಗಾರರ ಸಂಖ್ಯಾ ಬಲ.
11) ಇಲಾಖೆಯೊಂದಿಗೆ ವ್ಯವಹರಿಸಲು ಅಧಿಕಾರ ನೀಡಲ್ಪಟ್ಟ ವ್ಯಕ್ತಿಯ ವಿವರ, ಅಂದರೆ ಪೂರ್ಣ ಹೆಸರು, ಅಂಚೆ ವಿಳಾಸ, ಅವರ ದೂರವಾಣಿ ಮತ್ತು ಫ್ಯಾಕ್ಸ್ ಸಂಖ್ಯೆ ಮತ್ತು ವಿದ್ಯುನ್ಮಾನ ಅಂಚೆ ಐಡಿ, ಮತ್ತು ಅಂತಹ ವ್ಯಕ್ತಿಯು ಉದ್ದಿಮೆ / ಸಂಸ್ಥೆ / ಏಜೆನ್ಸಿಯಲ್ಲಿ ಹೊಂದಿರುವ ಸ್ಥಾನಮಾನ.
12) ಉದ್ದಿಮೆ / ಸಂಸ್ಥೆ / ಏಜೆನ್ಸಿಗಳು ಕಳೆದ ಮೂರು ವರ್ಷದಲ್ಲಿ ಮಾಡಿದ ಸರಬರಾಜು / ವ್ಯವಹಾರದ ವಿವರಗಳು, ಯಾವ ಯಾವ ಕಚೇರಿ / ಸಂಸ್ಥೆ / ಕಂಪೆನಿಗಳಿಗೆ ಸರಬರಾಜು ಮಾಡಲಾಗಿದೆ, ಅಂತಹ ಸರಬರಾಜಿನ ಪ್ರಮಾಣ ಮತ್ತು ದಿನಾಂಕ. (ಇನ್‌ವಾಯಿಸ್‌ಗಳ ಪ್ರತಿ ಲಗತ್ತಿಸುವುದು)

ಲಕೋಟೆಗಳ ಸ್ವೀಕೃತಿ ಮತ್ತು ತೆರೆಯುವುದು :

ಮೇಲಿನ ವಿವರಗಳನ್ನು ಒಳಗೊಂಡ ಮೊಹರು ಮಾಡಿದ ಲಕೋಟೆಗಳನ್ನು ಈ ಕೆಳಗಿನಂತೆ ವಿಳಾಸಿಸುವುದು.

ಲಕೋಟೆಯ ಮೇಲಿನ ತುದಿಯಲ್ಲಿ:

"2006-07ರ ಸಾಲಿನಲ್ಲಿ ಪಾಲಿಥೀನ್ ಚೀಲ / ಹಾಳೆ ಮತ್ತು ನೇಯ್ದು ಚೀಲಗಳ ಸರಬರಾಜಿಗೆ ಆಸಕ್ತಿಯ ಅಭಿವ್ಯಕ್ತಿ"

ವಿಳಾಸಿಸಬೇಕಾಗಿರುವುದು:

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ,

ಅರಣ್ಯ ಭವನ, ಮಲ್ಲೇಶ್ವರಂ,

ಬೆಂಗಳೂರು – 560 003.

ಮೊಹರು ಮಾಡಿದ ಲಕೋಟೆಯ ಕೆಳಭಾಗದ ಎಡಬದಿಯಲ್ಲಿ ಸಂಸ್ಥೆ / ಏಜೆನ್ಸಿಯ ಸಂಪೂರ್ಣ ಅಂಚೆ ವಿಳಾಸ.

ಎಲ್ಲಾ ವಿವರಗಳೊಂದಿಗೆ ಮೊಹರು ಮಾಡಿದ ಲಕೋಟೆಯನ್ನು ದಿನಾಂಕ 19.6.2006 ಅಥವಾ ಅದಕ್ಕಿಂತ ಪೂರ್ವದಲ್ಲಿ ಸ್ವೀಕೃತಿಯಾಗುವಂತೆ ಸ್ವೀಕೃತಿ ಬಾಕಿ ನೋಂದಾಯಿತ ಅಂಚೆ / ಕೋರಿಯರ್ ಮೂಲಕ ಕಳುಹಿಸಬಹುದು.

ಮೇಲಿನ ಮೊಹರು ಮಾಡಿದ ಲಕೋಟೆಗಳನ್ನು ದಿನಾಂಕ 20.6.2006 ರಂದು 11.00 ಘಂಟೆಗೆ ಈ ಕೆಳಗೆ ಸಹಿ ಹಾಕಿದವರಿಂದ ಈ ಉದ್ದೇಶಕ್ಕಾಗಿ ಅಧಿಕಾರ ನೀಡಲ್ಪಟ್ಟ ಅಧಿಕಾರಿಯ ಕೊಠಡಿಯಲ್ಲಿ ತೆರೆಯಲಾಗುವುದು. ದಿನಾಂಕ 30.6.2006 ರಂದು 12.00 ಘಂಟೆಗೆ ಸಂಭಾವ್ಯ ಪಟ್ಟಿಯ ಸಫಲ ಸಂಸ್ಥೆ / ಏಜೆನ್ಸಿಗಳ ಪಟ್ಟಿಯನ್ನು ಈ ಕಚೇರಿಯಲ್ಲಿ ಪ್ರಕಟಿಸಲಾಗುವುದು.

ದರ ಟೆಂಡರ್ ನಮೂನೆ:

ಸಂಭಾವ್ಯ ಪಟ್ಟಿಯ ಸಫಲ ಸಂಸ್ಥೆ / ಏಜೆನ್ಸಿಗಳು ಮಾತ್ರ "ದರ ಟೆಂಡರ್ ನಮೂನೆ"ಯನ್ನು ಈ ಕಚೇರಿಯಿಂದ ಪಡೆಯಲು ಅರ್ಹರಿರುತ್ತಾರೆ. "ದರ ಟೆಂಡರ್ ನಮೂನೆ"ಯ ಬೆಲೆ ರೂ. 5,000-00 ವನ್ನು ಬೆಂಗಳೂರಿನಲ್ಲಿ ನಗದೀಕರಿಸುವಂತಹ, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ರವರ ಹೆಸರಿನಲ್ಲಿ ಡಿ.ಡಿ. ಮೂಲಕ ಪಾವತಿಸುವುದು.

"ದರ ಟೆಂಡರ್ ನಮೂನೆ"ಯನ್ನು ದಿನಾಂಕ **3.7.2006** ರಂದು ಸಂಜೆ 5.00 ಘಂಟೆಯ ವರೆಗೆ ಬೆಂಗಳೂರು ಅರಣ್ಯ ಭವನದ ಸ್ವಾಗತ ಕಕ್ಷದಲ್ಲಿ (Reception Counter) ಯಲ್ಲಿ ವಿತರಿಸಲಾಗುವುದು. ಇತರೆ ನಮೂನೆಗಳಲ್ಲಿ ಮಂಡಿಸಿದ ಪ್ರಸ್ತಾವನೆಗಳನ್ನು ತಿರಸ್ಕರಿಸಲಾಗುವುದು.

ದರ ಟೆಂಡರ್ ಸಂಚಕಾರ ಠೇವಣಿ :

"ದರ ಟೆಂಡರ್ ನಮೂನೆಗೆ ಸಂಚಕಾರ ಠೇವಣಿಯಾಗಿ ಬೆಂಗಳೂರಿನಲ್ಲಿ ನಗದೀಕರಿಸಬಹುದಾದ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಹೆಸರಿಗೆ ರೂ.25,000-00ದ ಡಿ.ಡಿ.ಯನ್ನು ಲಗತ್ತಿಸುವುದು. ಸಂಚಕಾರ ಠೇವಣಿ ಇಲ್ಲದ "ದರ ಟೆಂಡರ್ ನಮೂನೆ" ಯನ್ನು ತಿರಸ್ಕರಿಸಲಾಗುವುದು. ಸಫಲವಾಗದ ದರ ಟೆಂಡರುಗಳ ಸಂಚಕಾರ ಠೇವಣಿಯನ್ನು ಹಿಂದಿರುಗಿಸಲಾಗವುದು / ವಿಮುಕ್ತಿಗೊಳಿಸಲಾಗುವುದು.

ಸಫಲವಾದ ಟೆಂಡರುಗಳ ಸಂಚಕಾರ ಠೇವಣಿಯನ್ನು ಕರಾರು ಪತ್ರ ಸಹಿ ಹಾಕುವ ಮುನ್ನ ಹಿಂದಿರುಗಿಸಲಾಗುವುದು.

ದರ ಟೆಂಡರ್ ಉಲ್ಲೇಖನ :

ದರ ಟೆಂಡರನ್ನು ನಿಗದಿತ "ದರ ಟೆಂಡರ್ ನಮೂನೆ"ಯಲ್ಲಿ ಮಾತ್ರ ಉಲ್ಲೇಖಿಸುವುದು. ಸಂಭಾವ್ಯ ಪಟ್ಟಿಯ ಆಸಕ್ತ ಸರಬರಾಜುದಾರರು ವಿವಿಧ ಅರಣ್ಯ ವಿಭಾಗಗಳ ಕೇಂದ್ರ ಸ್ಥಾನದಲ್ಲಿ ತಲುಪಿಸುವ ಬಗ್ಗೆ ನಿರ್ವಹಣೆ ಮತ್ತು ಸಾಗಾಟ ವೆಚ್ಚಗಳು ಸೇರಿದಂತೆ ದರಗಳನ್ನು ಉಲ್ಲೇಖಿಸಬೇಕು. ದರಗಳನ್ನು ವಿಭಾಗವಾರು ನಮೂದಿಸತಕ್ಕದ್ದು. LDPE ಚೀಲ ಮತ್ತು HDPE ಹಾಳೆಗಳಿಗೆ ದರವನ್ನು ಪ್ರತಿ ಟನ್‌ಗೆ ಮತ್ತು ನೇಯ್ದ ಚೀಲಕ್ಕೆ ದರವನ್ನು ಒಂದು ಸಾವಿರ ಸಂಖ್ಯೆಗೆ ಉಲ್ಲೇಖಿಸುವುದು.

ದರ ಟೆಂಡರ್ ನಮೂನೆಗಳ ಸ್ವೀಕೃತಿ ಮತ್ತು ತೆರೆಯುವುದು :

"ದರ ಟೆಂಡರು ನಮೂನೆ"ಗಳನ್ನು ದಿನಾಂಕ 5.7.2006 ರಂದು ಮಾತ್ರ ಸ್ವೀಕರಿಸಲಾಗುವುದು. "ದರ ಟೆಂಡರು ನಮೂನೆ"ಯನ್ನು ಅರಣ್ಯ ಭವನದ ನಾಲ್ಕನೇ ಮಹಡಿಯಲ್ಲಿ ಈ ಉದ್ದೇಶಕ್ಕೆ ವಿಶೇಷವಾಗಿ ಇರಿಸಿದ ಮೊಹರು ಮಾಡಿದ ಪೆಟ್ಟಿಗೆಯಲ್ಲಿ ಮಧ್ಯಾಹ್ನ 1.00 ಘಂಟೆಯ ಮುಂಚಿತವಾಗಿ ನಿಕ್ಷೇಪಿಸತಕ್ಕದ್ದು. ಪೆಟ್ಟಿಗೆಯನ್ನು ಮಧ್ಯಾಹ್ನ 1.05 ಘಂಟೆಗೆ ಮುಚ್ಚಲಾಗುವುದು. ದರ ಟೆಂಡರುಗಳನ್ನು ಅದೇ ಸಂಜೆ 3.00 ಘಂಟೆಗೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರ ಕಚೇರಿಯಲ್ಲಿ ಅಧಿಕಾರ ನೀಡಲ್ಪಟ್ಟ ಅಧಿಕಾರಿಯಿಂದ ತೆರೆಯಲಾಗುವುದು.

ಕರಾರು ಪತ್ರ :

ಸೂಕ್ತ ಪ್ರಕ್ರಿಯೆಗಳು ಮುಕ್ತಾಯವಾದ ತರುವಾಯ ಸಫಲ ಟೆಂಡರುದಾರ/ರುಗಳ ವಿವರ ಪ್ರಕಟಿಸಲಾಗುವುದು ಮತ್ತು ಅವರಿಗೆ ತಿಳಿಸಲಾಗುವುದು. ಹೀಗೆ ತಿಳಿಸಿದ ಅನಂತರ, ತಿಳುವಳಿಕೆ ಪತ್ರ ನೀಡಿದ ದಿನಾಂಕದಿಂದ 15 ದಿನಗಳೊಳಗೆ ಸಫಲ ಟೆಂಡರುದಾರ/ರು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳೊಂದಿಗೆ ತನ್ನ ವೆಚ್ಚದಲ್ಲಿ ಖರೀದಿಸಿದ ರೂ.100-00 ಮೌಲ್ಯದ ಛಾಪಾ ಕಾಗದದಲ್ಲಿ ಕರಾರು ಪತ್ರವನ್ನು ಮಾಡಿಕೊಳ್ಳತಕ್ಕದು. ಸಫಲ ಟೆಂಡರುದಾರ/ರು ಹೀಗೆ ಕರಾರು ಪತ್ರವನ್ನು ಮಾಡಿಕೊಳ್ಳುವಲ್ಲಿ ವಿಫಲರಾದಲ್ಲಿ ಅಂತಹವರ ಸಂಚಕಾರ ಠೇವಣಿಯನ್ನು ಮುಟ್ಟುಗೋಲು ಹಾಕಿ ಅಂತಹ ಟೆಂಡರುದಾರರುಗಳನ್ನು ಕಪ್ಪು ಪಟ್ಟಿಗೆ ಸೇರಿಸಲಾಗುವುದು ಮತ್ತು ಮುಂದಿನ ಮೂರು ನರ್ಸರಿ ಋತುಮಾನಗಳಿಗೆ ಇಲಾಖೆಗೆ ಪಾಲಿತಿನ್ ಚೀಲ / ಹಾಳೆ / ನೇಯ್ದ ಚೀಲಗಳ ಸರಬರಾಜಿನ ವಿಷಯದಲ್ಲಿ ಭಾಗಿಯಾಗಲು ಅನರ್ಹಗೊಳಿಸಲಾಗುವುದು.

ಮೇಲೆ ನಮೂದಿಸಿದ ಯಾವುದೇ ದಿನಾಂಕಗಳನ್ನು ಸರಕಾರವು ಸಾರ್ವತ್ರಿಕ ರಜಾ ದಿನವೆಂದು ಘೋಷಿಸಿದರೆ ಆಯಾಯ ಪ್ರಕ್ರಿಯೆಯನ್ನು ಅನಂತರದ ಕರ್ತವ್ಯದ ದಿನಕ್ಕೆ ಮುಂದುವರಿಸಲ್ಪಡುತ್ತದೆ.

ಸರಬರಾಜಿನ ವೇಳಾ ಪಟ್ಟಿ ಮತ್ತು ಬ್ಯಾಂಕ್ ಗ್ಯಾರೆಂಟಿ :

ಯಾವುದೇ ಅರಣ್ಯ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ಬೇಡಿಕೆ ಪತ್ರ ಸ್ವೀಕೃತಿಯಾದ ಒಂದು ತಿಂಗಳಿನೊಳಗೆ ಸಫಲ "ದರ ಟೆಂಡರುದಾರರು" ಸೂಚಿಸಲಾದ ವಿವರಗಳಂತೆ ಪಾಲಿತೀನ್ ಚೀಲ / ಹಾಳೆ / ನೇಯ್ದ ಚೀಲಗಳನ್ನು ಸರಬರಾಜು ಮಾಡತಕ್ಕದ್ದು. ಮೇಲಿನ ವೇಳಾ ಪಟ್ಟಿಗೆ ಬದ್ದರಾಗುವ ಬಗ್ಗೆ ಭದ್ರತೆಯಾಗಿ, ಸಫಲ ಟೆಂಡರು ಸರಬರಾಜುದಾರರು, ರೂ.3,00,000-00 (ರೂ. ಮೂರು ಲಕ್ಷ) ಮೌಲ್ಯದ (irrevocable) ಬ್ಯಾಂಕ್ ಗ್ಯಾರಂಟಿ / ಕಾಲಾವಧಿ ಠೇವಣಿ ಅಥವಾ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಒಪ್ಪುವಂತಹ ಇನ್ನಾವುದೇ ರೀತಿಯ ಠೇವಣಿಯನ್ನು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಹೆಸರಿನಲ್ಲಿ ಒತ್ತೆ ಇರಿಸತಕ್ಕದ್ದು ಹಾಗೂ ಸದರಿ ಬ್ಯಾಂಕ್ ಗ್ಯಾರಂಟಿಯು ದಿನಾಂಕ 31-3-2007ರ ನಂತರದ ಮೂರು ತಿಂಗಳವರೆಗೆ ಊರ್ಜಿತದಲ್ಲಿರುತ್ತದೆ. ಯಾವುದೇ ಸಂಭಾವ್ಯ ಪಟ್ಟಿಯ ಸಫಲ ಟೆಂಡರು ಸರಬರಾಜುದಾರರು ಮೇಲಿನ ವೇಳಾ ಪಟ್ಟಿಗೆ ಬದ್ದರಾಗಲು ವಿಫಲರಾದರೆ ಅಂತಹವರ ಫಿಡೆಲಿಟಿ ಬಾಂಡನ್ನು / ಬ್ಯಾಂಕ್ ಗ್ಯಾರಂಟಿಯನ್ನು ಮುಟ್ಟುಗೋಲು ಹಾಕಲಾಗುವುದು ಮತ್ತು ಮುಂದಿನ ಮೂರು ನರ್ಸರಿ ಋತುಮಾನಗಳಿಗೆ ಇಲಾಖೆಗೆ ಪಾಲಿತಿನ್ ಚೀಲ / ಹಾಳೆ ಮತ್ತು ನೇಯ್ದ ಚೀಲಗಳ ಸರಬರಾಜಿನ ವಿಷಯದಲ್ಲಿ ಭಾಗಿಯಾಗಲು ಅನರ್ಹಗೊಳಿಸಲಾಗುವುದು.

ಬೇಡಿಕೆ ಸಲ್ಲಿಸುವ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಮಾಡುವಂತಹ ತಪಾಸಣೆ / ತನಿಖೆ / ವಿಚಾರಣೆಯಲ್ಲಿ ಸರಬರಾಜು ಮಾಡಿದ ಸರಕು ಕಳಪೆ ಗುಣಮಟ್ಟದ್ದೆಂದು ಕಂಡು ಬಂದರೆ, ಸರಬರಾಜು ಸ್ವೀಕೃತಿಯಾದ 15 ದಿನಗಳೊಳಗೆ ಸಂಪೂರ್ಣ ಅಥವಾ ಭಾಗಶಃ ಸರಬರಾಜಾದ ಸರಕನ್ನು ತಿರಸ್ಕರಿಸುವ ಹಕ್ಕನ್ನು ಅಂತಹ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಕಾಯ್ದಿರಿಸಲಾಗಿದೆ.

ಕರ್ನಾಟಕ ಅರಣ್ಯ ಇಲಾಖೆಯು ಸರಬರಾಜು ಮಾಡಲು ಉದ್ದಿಮೆ / ಸಂಸ್ಥೆ / ಏಜೆನ್ಸಿಯು ಕೈಗೊಳ್ಳುವ ಯಾವುದೇ ಹಣಕಾಸು ಸಂಸ್ಥೆ / ಬ್ಯಾಂಕ್, ಕಚ್ಚಾ ಮಾಲು ಸರಬರಾಜು ಮಾಡುವ ಏಜೆನ್ಸಿ, ವಿದ್ಯುತ್ ಸರಬರಾಜು ಪ್ರಾಧಿಕಾರ, ಮಾಲಿನ್ಯ ನಿಯಂತ್ರಣ ಮಂಡಳಿ, ನಗರಸಭೆ ವ್ಯವಹರಣೆಗಳಿಗೆ ಹೊಣೆಗಾರರಾಗುವುದಿಲ್ಲ. ಸಂಬಂಧಪಟ್ಟ ಸಂಘಟನೆಗಳಿಂದ ಅಡ್ಡಿ ನಿವಾರಣೆಯನ್ನು ಪಡೆಯುವುದು ಸಫಲ ದರ ಟೆಂಡರು ಉದ್ದಿಮೆ / ಸಂಸ್ಥೆ / ಏಜೆನ್ಸಿಯ ಜವಾಬ್ದಾರಿಯಾಗಿರುತ್ತದೆ. ಮೇಲಿನ ಯಾವುದೇ ಉಲ್ಲಂಘನೆಯಿಂದ ವೇಳಾ ಪಟ್ಟಿಯ ಪ್ರಕಾರ ಸರಬರಾಜು ಮಾಡಲು ಅಡ್ಡಿ ಆತಂಕ ಉಂಟಾದರೆ ಸರಬರಾಜು ಮಾಡಲು ಉದ್ದಿಮೆ / ಸಂಸ್ಥೆ / ಏಜೆನ್ಸಿಯು ಅದಕ್ಕೆ ಪೂರ್ಣ ಹೊಣೆ ಮತ್ತು ಇಲಾಖೆಯಿಂದ ಸರಬರಾಜು ಸಮಯವನ್ನು ಸಡಿಲಿಸಲಾಗುವುದಿಲ್ಲ.

ಉದ್ದಿಮೆ / ಸಂಸ್ಥೆ / ಏಜೆನ್ಸಿಯು ಯಾವುದೇ ಸಾರ್ವಜನಿಕ ಅಥವಾ ಖಾಸಗಿ ಸಂಸ್ಥೆಯೊಂದಿಗೆ ಮಾಡಿಕೊಳ್ಳುವ, ಯಾವುದೇ ಆರ್ಥಿಕ ಅಥವಾ ಇತರ ರೀತಿಯ ಬದ್ಧತೆಗಳಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಸರಬರಾಜು ಬೇಡಿಕೆ ಆದೇಶವನ್ನು ಕರ್ನಾಟಕ ಅರಣ್ಯ ಇಲಾಖೆಯ ಅಧಿಕಾರ ಪತ್ರವೆಂದು ಪರಿಗಣಿಸತಕ್ಕದ್ದಲ್ಲ. ಅಂತಹ ವ್ಯವಹಾರಗಳು ಸಂಬಂಧಪಟ್ಟ ಉದ್ದಿಮೆ / ಸಂಸ್ಥೆ / ಏಜೆನ್ಸಿಗಳ ಸ್ವಂತ ಜವಾಬ್ದಾರಿಯಲ್ಲಿ (risk) ಆಗಿರುತ್ತದೆ.

ಬೇಡಿಕೆ ನೀಡಿದ ಸರಕನ್ನು ತೃಪ್ತಿಕರವಾಗಿ ಸರಬರಾಜು ಮಾಡಿದಂತಹ ಸಫಲ ದರ ಟೆಂಡರುದಾರರ ಬ್ಯಾಂಕ್ ಗ್ಯಾರಂಟಿಯನ್ನು ಜೂನ್ 2007ರ ಅಂತ್ಯದೊಳಗೆ ವಿಮುಕ್ತಿಗೊಳಿಸಲಾಗುವುದು.

ಬಿಲ್ಲುಗಳ ಪಾವತಿ :

ಸರಬರಾಜುಗಳು ಸ್ವೀಕೃತಿಯಾದ ತರುವಾಯ ಬೇಡಿಕೆ ನೀಡಿದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಬಿಲ್ಲುಗಳ ಪಾವತಿಯ ಬಗ್ಗೆ ಕ್ರಮ ಕೈಗೊಳ್ಳುವರು. ಸರಕಾರದಿಂದ ಅನುದಾನ ಬಿಡುಗಡೆಯ ಶರ್ತಕ್ಕೆ ಒಳಪಟ್ಟು, ಬೇಡಿಕೆ ನೀಡಿದ ಸರಕನ್ನು ಸರಬರಾಜು ಮಾಡಿರುವುದರಿಂದ ಉದ್ಭವಿಸುವ ಬಿಲ್ಲುಗಳನ್ನು ಸರಕು ಸ್ವೀಕೃತಿಯಾದ 90 ದಿನಗಳೊಳಗೆ ಪಾವತಿಸಲಾಗುವುದು.

ಮೇಲ್ಮನವಿ :

ಅರ್ಹತಾಪೂರ್ವ ಮತ್ತು ದರ ಟೆಂಡರು ಪ್ರಕ್ರಿಯೆಗಳಿಗೆ ಸಂಬಂಧಿಸಿದ ಮೇಲ್ಮನವಿಗಳನ್ನು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಸಲ್ಲಿಸತಕ್ಕದ್ದು. ಸರಬರಾಜು ಮಾಡಿದ ಮೇಲೆ ಅಥವಾ ಸರಬರಾಜು ಬೇಡಿಕೆಗೆ ಸಂಬಂಧಿಸಿದಂತೆ ವಿವಾದಗಳು ಉದ್ಭವಿಸಿದಲ್ಲಿ ಯಾವ ವೃತ್ತದ ವ್ಯಾಪ್ತಿಯ ವಿಭಾಗಕ್ಕೆ ಸರಬರಾಜು ಸಂಬಂಧಿಸಿದೆಯೋ ಅಂತಹ ವೃತ್ತದ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಮೇಲ್ಮನವಿಯನ್ನು ಸಲ್ಲಿಸತಕ್ಕದ್ದು.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ.

## ANNEXURE-1

## Karnataka Forest Department

### Prequalification Tenders to Short List Manufacturers/Agencies/Firms for Supply of Polythene Bags/Sheets, Woven Sacks and to Determine Rate Per Tonne of Polythene Bags/sheets & 1000 Nos. of Woven Sacks

### ಅರಣ್ಯ ನರ್ಸರಿ ಕಾಮಗಾರಿಗಳಿಗಾಗಿ 2006–07ನೇ ಸಾಲಿನಲ್ಲಿ ಸರಬರಾಜಿಗಾಗಿ ರೇಟ್ ಟೆಂಡರ್ ದರಗಳನ್ನು ನಮೂದಿಸಬೇಕಾಗಿರುವ ಪಾಲಿಥೀನ್ ಚೀಲ / ಶೀಟ್ ಮತ್ತು ವೂವನ್ ಸ್ಯಾಕ್ಸಗಳ ಅಳತೆ ಮತ್ತು ಗುಣಮಟ್ಟದ ವಿವರ

1. ಪಾರದರ್ಶಕ ಯು.ವಿ. ಸ್ಟೆಬಿಲೈಸಡ್ ಎಲ್‌ಡಿಪಿಇ ಪಾಲಿಥೀನ್ ಚೀಲ. (ಪ್ರತಿ ಟನ್ನಿಗೆ ದರಗಳನ್ನು ನಮೂದಿಸುವುದು.)

| ಪಾಲಿಥೀನ್ ಚೀಲಗಳ ಅಳತೆ (ಇಂಚುಗಳಲ್ಲಿ) | ಗೇಜ್ | ಪ್ರತಿ ಕೆ.ಜಿ.ಗೆ ಚೀಲಗಳ ಸರಾಸರಿ ಸಂಖ್ಯೆ | ಷರಾ |
|---|---|---|---|
| 4 x 6 | 200 | 625 | 1. ಕೆಳಭಾಗದ ಹೀಟ್ ಸೀಲ್ ದೃಢವಾಗಿದ್ದು ಗ್ಯಾಪ್ ಇಲ್ಲದಂತೆ ಸಂಪೂರ್ಣವಾಗಿರಬೇಕು. ಬ್ಯಾಗುಗಳು ಬಾಕ್ಸ್ ವಿನ್ಯಾಸ ಹೊಂದಿರಬೇಕು. ಸಮರ್ಪಕ ರೀತಿಯಲ್ಲಿ ಒಂದು ಬದಿಯಲ್ಲಿ ಮಾತ್ರ ಚೀಲಗಳ ಬಾಯಿ ತೆರೆದಿರಬೇಕು ಹಾಗೂ ಸೂಕ್ತ ರೀತಿಯಲ್ಲಿ ರಂದ್ರಗಳನ್ನು ಪಂಚ್ ಮಾಡಿರಬೇಕು.<br>2. ನರ್ಸರಿ ಅವಧಿಯಲ್ಲಿ ಚೀಲಗಳ ಬಾಳಿಕೆ ದೃಷ್ಟಿಯಿಂದ ಉತ್ತಮ ಗುಣಮಟ್ಟದ ಗ್ರಾನ್ಯೂಲ್‌ಗಳನ್ನು ಬಳಸಿ ತಯಾರಿಸಿರಬೇಕು, ರೀಸೈಕಲ್ ಸಾಮಗ್ರಿ ಅಥವಾ ಗ್ರಾನ್ಯೂಲ್‌ಗಳನ್ನು ಬಳಸಿರಬಾರದು. |
| 5 x 8 | 240 | 320 | |
| 6 x 9 | 300 | 200 | |
| 8 x 12 | 500 | 60 | |
| 9 x 12 | 500 | 60 | |
| 10 x 16 | 600 | 34 | |

2. ಕಪ್ಪು ಪಾಲಿಥೀನ್ ಶೀಟ್ / ಹಾಳೆಗಳು (ಪ್ರತಿ ಟನ್ನಿಗೆ ದರಗಳನ್ನು ನಮೂದಿಸುವುದು).

| | |
|---|---|
| ಸೂಕ್ತ ಅಳತೆಯ (ಉದ್ದ ಮತ್ತು ಅಗಲ) ಕಪ್ಪು ಪಾಲಿಥೀನ್ ಶೀಟ್ / ಹಾಳೆಗಳು | ನರ್ಸರಿ ಅವಧಿಯಲ್ಲಿ ಶೀಟ್‌ಗಳ ಬಾಳಿಕೆ ದೃಷ್ಟಿಯಿಂದ ಉತ್ತಮ ಗುಣಮಟ್ಟದ ಗ್ರಾನ್ಯೂಲ್‌ಗಳನ್ನು ಬಳಸಿ ತಯಾರಿಸಿರಬೇಕು, ರೀಸೈಕಲ್ ಸಾಮಗ್ರಿ ಅಥವಾ ಗ್ರಾನ್ಯೂಲ್‌ಗಳನ್ನು ಬಳಸಿರಬಾರದು. |

3. 10X10=(1000) ಡೀನಿಯರ್ ಅಳತೆಯ ಒಂದನೇ ದರ್ಜೆ ಲ್ಯಾಮಿನೇಟೆಡ್ ಮೆಶ್‌ನಿಂದ ತಯಾರಿಸಿದ ಹೆಚ್.ಡಿ.ಪಿ.ಇ. ವೋವನ್ ಸ್ಯಾಕ್ಸ್. (ಪ್ರತಿ 1000 ಚೀಲಗಳಿಗೆ ದರಗಳನ್ನು ನಮೂದಿಸುವುದು.)

| ಅಳತೆ (ಇಂಚುಗಳಲ್ಲಿ) | ಚೀಲಗಳ ತೂಕ (ಗ್ರಾಂಗಳಲ್ಲಿ) | ಷರಾ |
|---|---|---|
| 8 x 12 | 19 | ಸೂಚಿತ ಅಳತೆಗಳನ್ನು ನಿಖರವಾಗಿ ಹೊಂದಿರಬೇಕು. ಚೀಲದ ಮೇಲ್ಭಾಗದಲ್ಲಿ ಎಳೆಗಳು ಕಿತ್ತು ಬಾರದಂತೆ ಸೂಕ್ತ ರೀತಿಯಲ್ಲಿ ಮಡಚಿ ಚೀಲದ ಬಾಯಿ ಉದ್ದಕ್ಕೂ ಒಂದು ಹೊಲಿಗೆ ಇರಬೇಕು, ಉಳಿದ ಮೂರು ಬದಿಗಳಲ್ಲಿ ಉತ್ತಮವಾದ ಎರಡು ಹೊಲಿಗೆ ಇದ್ದು ತೆಳುವಾದ ಪಾಲಿ ಒಳ ಹೊದಿಕೆ ಇರುವುದು ಕಡ್ಡಾಯ ಹಾಗೂ ಕನಿಷ್ಟ ನಾಲ್ಕು ಕಡೆ ಪಂಚ್ ಮಾಡಿದ ರಂಧ್ರಗಳಿರಬೇಕು. ಹೊಲಿಗೆಗಳು ನೈಲಾನ್ ದಾರದ ಹೊಲಿಗೆಗಳಾಗಿರಬೇಕು. ನೇಯ್ದು ಚೀಲಗಳು ಬಿಳಿ ಬಣ್ಣದ್ದಾಗಿರಬೇಕು. ಬ್ಯಾಗ್ ತಯಾರಿಸುವ ಮೂಲ ವಸ್ತು ಯಾವುದೇ ಪ್ರಿಂಟ್ ಹೊಂದಿರಬಾರದು. |
| 9 x 12 | 28 | |
| 10 x 16 | 23 | |
| 13 x 19 | 45 | |

ದರಗಳನ್ನು ನಿರ್ದಿಷ್ಟ ಸ್ಥಳಕ್ಕೆ ಸಾಗಾಣಿಕೆ ವೆಚ್ಚ ಮತ್ತು ತೆರಿಗೆಗಳು ಸೇರಿದಂತೆ ನಮೂದಿಸುವುದು.

## ANNEXURE-2

Prequalification Tenders to Short List Manufacturers/Agencies/Firms for Supply of Polythene Bags/Sheets, Woven Sacks and to Determine Rate Per Tonne of Polythene Bags/Sheets & 1000 Nos. of Woven Sacks

2006-07ನೇ ಸಾಲಿಗೆ ಪಾಲಿಥೀನ್ ಚೀಲ / ಶೀಟ್ ಮತ್ತು ವೋವನ್ ಸ್ಯಾಕ್ಸ್‌ಗಳನ್ನು ಸರಬರಾಜು ಮಾಡಲು ಬೇಡಿಕೆ ಸಲ್ಲಿಸಬಹುದಾದ ಅರಣ್ಯ ವಿಭಾಗಗಳ ಹೆಸರು, ಕೇಂದ್ರ ಸ್ಥಾನ ಮತ್ತು ಬೇಡಿಕೆ ಸಲ್ಲಿಸುವ ಅಧಿಕಾರಿಯ ಪದನಾಮದ ವಿವರ.

| ಕ್ರ.ಸಂ. | ಅರಣ್ಯ ವಿಭಾಗದ ಹೆಸರು | ಅರಣ್ಯ ವಿಭಾಗದ ಕೇಂದ್ರ ಸ್ಥಾನ | ಬೇಡಿಕೆ ಪತ್ರ ಸಲ್ಲಿಸುವ ಅಧಿಕಾರಿಗಳ ಪದನಾಮ |
|---|---|---|---|
| 1 | 2 | 3 | 4 |
| 1 | ಬಾಗಲಕೋಟೆ ಸಾಮಾಜಿಕ ಅರಣ್ಯ ವಿಭಾಗ | ಬಾಗಲಕೋಟೆ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 2 | ಬಾಗಲಕೋಟೆ ಪ್ರಾದೇಶಿಕ ಅರಣ್ಯ ವಿಭಾಗ | ಬಾಗಲಕೋಟೆ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 3 | ಬಂಡಿಪುರ ಹುಲಿಯೋಜನೆ ವಿಭಾಗ | ಬಂಡಿಪುರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 4 | ಅರಣ್ಯ ಕೃಷಿಕರು, ಕೇಂದ್ರವಲಯ | ದೊರೆಸಾನಿಪಾಳ್ಯ ಬೆಂಗಳೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 5 | ಬೆಂಗಳೂರು ಅರಣ್ಯ ಸಂಶೋಧನಾ ವಿಭಾಗ | ದೊರೆಸಾನಿಪಾಳ್ಯ ಬೆಂಗಳೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 6 | ಬೆಂಗಳೂರು ಪ್ರಾದೇಶಿಕ ಅರಣ್ಯ ಗ್ರಾಮಾಂತರ ವಿಭಾಗ | ಬೆಂಗಳೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 7 | ಬೆಂಗಳೂರು ಪ್ರಾದೇಶಿಕ ಅರಣ್ಯ ನಗರ ವಿಭಾಗ | ಬೆಂಗಳೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 8 | ಬೆಂಗಳೂರು ಸಾಮಾಜಿಕ ಅರಣ್ಯ ನಗರ ವಿಭಾಗ | ಬೆಂಗಳೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 9 | ಬೆಂಗಳೂರು ಸಾಮಾಜಿಕ ಅರಣ್ಯ ಗ್ರಾಮಾಂತರ ವಿಭಾಗ | ಬೆಂಗಳೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 10 | ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ | ಬೆಂಗಳೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 11 | ಬೆಳಗಾಂ ಪ್ರಾದೇಶಿಕ ಅರಣ್ಯ ವಿಭಾಗ | ಬೆಳಗಾಂ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 12 | ಬೆಳಗಾಂ ಸಾಮಾಜಿಕ ಅರಣ್ಯ ವಿಭಾಗ | ಬೆಳಗಾಂ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |

| 1 | 2 | 3 | 4 |
|---|---|---|---|
| 13 | ಬಳ್ಳಾರಿ ಸಾಮಾಜಿಕ ಅರಣ್ಯ ವಿಭಾಗ | ಬಳ್ಳಾರಿ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 14 | ಅರಣ್ಯ ಕೃಷಿಕರು | ಬಳ್ಳಾರಿ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 15 | ಬಳ್ಳಾರಿ ಪ್ರಾದೇಶಿಕ ಅರಣ್ಯ ವಿಭಾಗ | ಬಳ್ಳಾರಿ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 16 | ಭದ್ರಾವತಿ ಪ್ರಾದೇಶಿಕ ಅರಣ್ಯ ವಿಭಾಗ | ಭದ್ರಾವತಿ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 17 | ಬೀದರ್ ಸಾಮಾಜಿಕ ಅರಣ್ಯ ವಿಭಾಗ | ಬೀದರ್ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 18 | ಬೀದರ್ ಪ್ರಾದೇಶಿಕ ಅರಣ್ಯ ವಿಭಾಗ | ಬೀದರ್ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 19 | ಬಿಜಾಪುರ ಸಾಮಾಜಿಕ ಅರಣ್ಯ ವಿಭಾಗ | ಬಿಜಾಪುರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 20 | ಬಿಜಾಪುರ ಪ್ರಾದೇಶಿಕ ಅರಣ್ಯ ವಿಭಾಗ | ಬಿಜಾಪುರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 21 | ಕಾವೇರಿ ವನ್ಯಜೀವಿ ವಿಭಾಗ | ಕನಕಪುರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 22 | ಚಾಮರಾಜನಗರ ವನ್ಯಜೀವಿ ವಿಭಾಗ | ಚಾಮರಾಜನಗರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 23 | ಚಾಮರಾಜನಗರ ಸಾಮಾಜಿಕ ಅರಣ್ಯ ವಿಭಾಗ | ಚಾಮರಾಜನಗರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 24 | ಚಿಕ್ಕಮಗಳೂರು ಸಾಮಾಜಿಕ ಅರಣ್ಯ ವಿಭಾಗ | ಚಿಕ್ಕಮಗಳೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 25 | ಚಿಕ್ಕಮಗಳೂರು ಪ್ರಾದೇಶಿಕ ಅರಣ್ಯ ವಿಭಾಗ | ಚಿಕ್ಕಮಗಳೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 26 | ಚಿಕ್ಕಮಗಳೂರು ಭದ್ರಾ ವನ್ಯಜೀವಿ ವಿಭಾಗ | ಚಿಕ್ಕಮಗಳೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 27 | ಚಿತ್ರದುರ್ಗ ಪ್ರಾದೇಶಿಕ ಅರಣ್ಯ ವಿಭಾಗ | ಚಿತ್ರದುರ್ಗ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 28 | ಚಿತ್ರದುರ್ಗ ಸಾಮಾಜಿಕ ಅರಣ್ಯ ವಿಭಾಗ | ಚಿತ್ರದುರ್ಗ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 29 | ದಾಂಡೇಲಿ ವನ್ಯಜೀವಿ ವಿಭಾಗ | ದಾಂಡೇಲಿ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 30 | ದಾವಣಗೆರೆ ಸಾಮಾಜಿಕ ಅರಣ್ಯ ವಿಭಾಗ | ದಾವಣಗೆರೆ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 31 | ದಾವಣಗೆರೆ ಪ್ರಾದೇಶಿಕ ಅರಣ್ಯ ವಿಭಾಗ | ದಾವಣಗೆರೆ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 32 | ಧಾರವಾಡ ಸಾಮಾಜಿಕ ಅರಣ್ಯ ವಿಭಾಗ | ಧಾರವಾಡ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 33 | ಧಾರವಾಡ ಪ್ರಾದೇಶಿಕ ಅರಣ್ಯ ವಿಭಾಗ | ಧಾರವಾಡ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 34 | ಅರಣ್ಯ ಕೃಷಿಕರು | ಧಾರವಾಡ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 35 | ಗದಗ ಸಾಮಾಜಿಕ ಅರಣ್ಯ ವಿಭಾಗ | ಗದಗ್ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 36 | ಗದಗ್ ಪ್ರಾದೇಶಿಕ ಅರಣ್ಯ ವಿಭಾಗ | ಗದಗ್ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 37 | ಘಟಪ್ರಭಾ ಪ್ರಾದೇಶಿಕ ಅರಣ್ಯ ವಿಭಾಗ | ಗೋಕಾಕ್ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 38 | ಗುಲ್ಬರ್ಗಾ ಸಾಮಾಜಿಕ ಅರಣ್ಯ ವಿಭಾಗ | ಗುಲ್ಬರ್ಗಾ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 39 | ಗುಲ್ಬರ್ಗಾ ಪ್ರಾದೇಶಿಕ ಅರಣ್ಯ ವಿಭಾಗ | ಗುಲ್ಬರ್ಗಾ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 40 | ಹಳಿಯಾಳ ಪ್ರಾದೇಶಿಕ ಅರಣ್ಯ ವಿಭಾಗ | ಹಳಿಯಾಳ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 41 | ಹಾಸನ ಸಾಮಾಜಿಕ ಅರಣ್ಯ ವಿಭಾಗ | ಹಾಸನ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 42 | ಹಾಸನ ಪ್ರಾದೇಶಿಕ ಅರಣ್ಯ ವಿಭಾಗ | ಹಾಸನ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 43 | ಹಾವೇರಿ ಸಾಮಾಜಿಕ ಅರಣ್ಯ ವಿಭಾಗ | ಹಾವೇರಿ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 44 | ಹಾವೇರಿ ಪ್ರಾದೇಶಿಕ ಅರಣ್ಯ ವಿಭಾಗ | ಹಾವೇರಿ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 45 | ಹೊನ್ನಾವರ ಪ್ರಾದೇಶಿಕ ಅರಣ್ಯ ವಿಭಾಗ | ಹೊನ್ನಾವರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 46 | ಹುಣಸೂರು ಪ್ರಾದೇಶಿಕ ಅರಣ್ಯ ವಿಭಾಗ | ಹುಣಸೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 47 | ಹುಣಸೂರು ವನ್ಯಜೀವಿ ವಿಭಾಗ | ಹುಣಸೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 48 | ಕುದುರೆಮುಖ ವನ್ಯಜೀವಿ ವಿಭಾಗ | ಕಾರ್ಕಳ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 49 | ಕಾರವಾರ ಸಾಮಾಜಿಕ ಅರಣ್ಯ ವಿಭಾಗ | ಕಾರವಾರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |

| 1 | 2 | 3 | 4 |
|---|---|---|---|
| 50 | ಕಾರವಾರ ಪ್ರಾದೇಶಿಕ ಅರಣ್ಯ ವಿಭಾಗ | ಕಾರವಾರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 51 | ಕೋಲಾರ ಪ್ರಾದೇಶಿಕ ಅರಣ್ಯ ವಿಭಾಗ | ಕೋಲಾರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 52 | ಕೋಲಾರ ಸಾಮಾಜಿಕ ಅರಣ್ಯ ವಿಭಾಗ | ಕೋಲಾರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 53 | ಕೊಳ್ಳೇಗಾಲ ಪ್ರಾದೇಶಿಕ ಅರಣ್ಯ ವಿಭಾಗ | ಕೊಳ್ಳೇಗಾಲ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 54 | ಕೊಪ್ಪ ಪ್ರಾದೇಶಿಕ ಅರಣ್ಯ ವಿಭಾಗ | ಕೊಪ್ಪ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 55 | ಕೊಪ್ಪಳ್ ಸಾಮಾಜಿಕ ಅರಣ್ಯ ವಿಭಾಗ | ಕೊಪ್ಪಳ್ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 56 | ಕೊಪ್ಪಳ ಪ್ರಾದೇಶಿಕ ಅರಣ್ಯ ವಿಭಾಗ | ಕೊಪ್ಪಳ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 57 | ಕುಂದಾಪುರ ಪ್ರಾದೇಶಿಕ ಅರಣ್ಯ ವಿಭಾಗ | ಕುಂದಾಪುರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 58 | ಮಡಿಕೇರಿ ಪ್ರಾದೇಶಿಕ ಅರಣ್ಯ ವಿಭಾಗ | ಮಡಿಕೇರಿ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 59 | ಮಡಿಕೇರಿ ಸಾಮಾಜಿಕ ಅರಣ್ಯ ವಿಭಾಗ | ಮಡಿಕೇರಿ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 60 | ಅರಣ್ಯ ಕೃಷಿಕರು | ಮಡಿಕೇರಿ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 61 | ಮಂಡ್ಯ ಸಾಮಾಜಿಕ ಅರಣ್ಯ ವಿಭಾಗ | ಮಂಡ್ಯ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 62 | ಮಂಡ್ಯ ಪ್ರಾದೇಶಿಕ ಅರಣ್ಯ ವಿಭಾಗ | ಮಂಡ್ಯ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 63 | ಮಂಗಳೂರು ಸಾಮಾಜಿಕ ಅರಣ್ಯ ವಿಭಾಗ | ಮಂಗಳೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 64 | ಮಂಗಳೂರು ಪ್ರಾದೇಶಿಕ ಅರಣ್ಯ ವಿಭಾಗ | ಮಂಗಳೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 65 | ಮೈಸೂರು ಸಾಮಾಜಿಕ ಅರಣ್ಯ ವಿಭಾಗ | ಮೈಸೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 66 | ಮೈಸೂರು ಪ್ರಾದೇಶಿಕ ಅರಣ್ಯ ವಿಭಾಗ | ಮೈಸೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 67 | ರಾಯಚೂರು ಸಾಮಾಜಿಕ ಅರಣ್ಯ ವಿಭಾಗ | ರಾಯಚೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 68 | ರಾಯಚೂರು ಪ್ರಾದೇಶಿಕ ಅರಣ್ಯ ವಿಭಾಗ | ರಾಯಚೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 69 | ಸಾಗರ ಪ್ರಾದೇಶಿಕ ಅರಣ್ಯ ವಿಭಾಗ | ಸಾಗರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 70 | ಶಿವಮೊಗ್ಗ ಪ್ರಾದೇಶಿಕ ಅರಣ್ಯ ವಿಭಾಗ | ಶಿವಮೊಗ್ಗ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 71 | ಶಿವಮೊಗ್ಗ ಸಾಮಾಜಿಕ ಅರಣ್ಯ ವಿಭಾಗ | ಶಿವಮೊಗ್ಗ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 72 | ಶಿವಮೊಗ್ಗ ವನ್ಯಜೀವಿ ವಿಭಾಗ | ಶಿವಮೊಗ್ಗ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 73 | ಶಿರಸಿ ಪ್ರಾದೇಶಿಕ ಅರಣ್ಯ ವಿಭಾಗ | ಶಿರಸಿ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 74 | ತುಮಕೂರು ಸಾಮಾಜಿಕ ಅರಣ್ಯ ವಿಭಾಗ | ತುಮಕೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 75 | ತುಮಕೂರು ಪ್ರಾದೇಶಿಕ ಅರಣ್ಯ ವಿಭಾಗ | ತುಮಕೂರು | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 76 | ಉಡುಪಿ ಸಾಮಾಜಿಕ ಅರಣ್ಯ ವಿಭಾಗ | ಉಡುಪಿ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 77 | ವಿರಾಜಪೇಟೆ ಪ್ರಾದೇಶಿಕ ಅರಣ್ಯ ವಿಭಾಗ | ವಿರಾಜಪೇಟೆ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |
| 78 | ಯಲ್ಲಾಪುರ ಪ್ರಾದೇಶಿಕ ಅರಣ್ಯ ವಿಭಾಗ | ಯಲ್ಲಾಪುರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು. |

2006-07ರ ಸಾಲಿನಲ್ಲಿ ಪಾಲಿಥೀನ್ ಚೀಲ/ಹಾಳೆ ಮತ್ತು ನೇಯ್ದ ಚೀಲಗಳನ್ನು ಸರಬರಾಜು ಮಾಡಲು ಅರ್ಹತಾ ಉತ್ಪಾದಕರು/ಏಜೆನ್ಸಿಗಳು/ಸಂಸ್ಥೆಗಳು ಆಸಕ್ತಿಯನ್ನು ವ್ಯಕ್ತಪಡಿಸುವ ಅರ್ಜಿ ನಮೂನೆ.

| | | |
|---|---|---|
| 1. | ಸಂಚಕಾರ ಠೇವಣಿ ವಿವರಗಳು (ರೂ.ಗಳಲ್ಲಿ ಮೊತ್ತ, ಡಿ.ಡಿ.ಸಂಖ್ಯೆ, ದಿನಾಂಕ ಮತ್ತು ಬ್ಯಾಂಕಿನ ಹೆಸರು) | |
| 2. | ಉದ್ದಿಮೆ / ಸಂಸ್ಥೆ / ಏಜೆನ್ಸಿಯ ನೋಂದಾಯಿತ ಹೆಸರು. | |
| 3. | ನೋಂದಣಿಯ ವರ್ಷ ಮತ್ತು ನೋಂದಣಾತಿ ಪ್ರಾಧಿಕಾರಿ. | |
| 4. | ನೋಂದಣಿ ಧೃಡಪತ್ರಿಕೆಯ ವಿವರಗಳು | |
| 5. | ಉದ್ದಿಮೆ / ಸಂಸ್ಥೆ / ಏಜೆನ್ಸಿ ಕಛೇರಿಯ ಸಂಪೂರ್ಣ ಅಂಚೆ ವಿಳಾಸ, ದೂರವಾಣಿ / ಫ್ಯಾಕ್ಸ್ ಸಂಖ್ಯೆ ಮತ್ತು ವಿದ್ಯೂನ್ಮಾನ ವಿಳಾಸ. | |

| | | |
|---|---|---|
| 6. | ಉತ್ಪಾದನಾ ಘಟಕದ ಸ್ಥಾಪಿಸಿರುವ ಸ್ಥಳ, ಸಂಪೂರ್ಣ ಅಂಚೆ ವಿಳಾಸ, ದೂರವಾಣಿ / ಫ್ಯಾಕ್ಸ್ ಸಂಖ್ಯೆ | |
| 7. | ಕರ್ನಾಟಕ ಮಾರಾಟ ಕರ ನೋಂದಣಿ ವಿವರಗಳು ಮತ್ತು ಯಾವ ವರ್ಷದವರೆಗೆ ಎಸೆಸ್‌ಮೆಂಟ್ ಆದೇಶವನ್ನು ಸಕ್ಷಮ ಪ್ರಾಧಿಕಾರದಿಂದ ನೀಡಲಾಗಿದೆ. (ತೆರಿಗೆ ತೀರುವಳಿ ಪ್ರಮಾಣ ಪತ್ರ ಲಗತ್ತಿಸುವುದು) | |
| 8. | ಕೇಂದ್ರ ಮಾರಾಟ ಕರ ನೋಂದಣಿ ವಿವರಗಳು ಮತ್ತು ಯಾವ ವರ್ಷದವರೆಗೆ ಎಸೆಸ್‌ಮೆಂಟ್ ಆದೇಶವನ್ನು ಸಕ್ಷಮ ಪ್ರಾಧಿಕಾರದಿಂದ ನೀಡಲಾಗಿದೆ. (ತೆರಿಗೆ ತೀರುವಳಿ ಪ್ರಮಾಣ ಪತ್ರ ಲಗತ್ತಿಸುವುದು) | |
| 9. | ಯಾವ ವರ್ಷದವರೆಗೆ ಆದಾಯ ಕರ ತೀರುವಳಿ ಮಾಡಲಾಗಿದೆ. (ತೆರಿಗೆ ತೀರುವಳಿ ಪ್ರಮಾಣ ಪತ್ರ ಲಗತ್ತಿಸುವುದು) | |
| 10. | ಉದ್ದಿಮೆ / ಸಂಸ್ಥೆ / ಏಜೆನ್ಸಿಗಳು ಉತ್ಪಾದಿಸುವ ಉತ್ಪನ್ನಗಳ ವಿವರ ಮತ್ತು ತಾಂತ್ರಿಕ ಗುಣಮಟ್ಟಗಳ ತಪಶೀಲು (ತಾಂತ್ರಿಕ ಗುಣಮಟ್ಟಗಳ ತಪಶೀಲುಗಳ ವಿವರಗಳನ್ನು ಲಗತ್ತಿಸುವುದು) | |
| 11. | ಉದ್ದಿಮೆ / ಸಂಸ್ಥೆ / ಏಜೆನ್ಸಿಯ ಸ್ಥಾಪಿತ ಸಾಮರ್ಥ್ಯ | |
| 12. | ಉದ್ದಿಮೆ / ಸಂಸ್ಥೆ / ಏಜೆನ್ಸಿಯು ಅಳವಡಿಸಿಕೊಂಡಿರುವ ತಾಂತ್ರಿಕತೆ ವಿವರ | |
| 13. | ಕಚ್ಚಾ ಸಾಮಗ್ರಿಯ ಮೂಲ ಮತ್ತು ಕಚ್ಚಾ ಸಾಮಗ್ರಿಯನ್ನು ಪಡೆಯಲು ಉದ್ದಿಮೆಯು ಹೊಂದಿರುವ ಈಗಿನ ವ್ಯವಸ್ಥೆ (ಸಂಬಂಧಪಟ್ಟ ದಾಖಲೆಗಳನ್ನು ಲಗತ್ತಿಸುವುದು) | |
| 14. | ಉದ್ದಿಮೆ / ಸಂಸ್ಥೆ / ಏಜೆನ್ಸಿಯ ಅಧಿಕೃತ ಬ್ಯಾಂಕುಗಳು (ಧೃಡ ಪತ್ರಿಕೆಯನ್ನು ಲಗತ್ತಿಸುವುದು) | |
| 15. | ಅಗತ್ಯವಿರುವ ಮೇಲಿನ ಸಾಮಗ್ರಿಗಳನ್ನು ಉದ್ದಿಮೆ / ಸಂಸ್ಥೆ / ಏಜೆನ್ಸಿಗಳಿಗೆ ಯಾವ ಯಾವ ಅರಣ್ಯ ವಿಭಾಗಗಳಿಗೆ ಪರಿಣಾಮಕಾರಿಯಾಗಿ ಮತ್ತು ವ್ಯಾವಹಾರಿಕವಾಗಿ ಒದಗಿಸಲು ಸಾಧ್ಯವೆನ್ನುವ ವಿವರಗಳು.<br>ವಿಭಾಗಗಳ ಹೆಸರನ್ನು ನಮೂದಿಸಲು ಸ್ಥಳಾವಕಾಶ ಸಾಕಾಗದೇ ಇದ್ದಲ್ಲಿ ಪ್ರತ್ಯೇಕವಾಗಿ ಲಗತ್ತಿಸುವುದು. | |
| 16. | ಉದ್ದಿಮೆ / ಸಂಸ್ಥೆ / ಏಜೆನ್ಸಿಯಲ್ಲಿನ ನೌಕರರ / ಕೆಲಸಗಾರರ ಸಂಖ್ಯಾ ಬಲ. | |
| 17. | ಇಲಾಖೆಯೊಂದಿಗೆ ವ್ಯವಹರಿಸಲು ಅಧಿಕಾರ ನೀಡಲ್ಪಟ್ಟ ವ್ಯಕ್ತಿಯ ವಿವರ, ಅಂದರೆ ಪೂರ್ಣಹೆಸರು, ಅಂಚೆ ವಿಳಾಸ, ದೂರವಾಣಿ ಮತ್ತು ಫ್ಯಾಕ್ಸ್ ಸಂಖ್ಯೆ ಮತ್ತು ವಿದ್ಯುನ್ಮಾನ ಅಂಚೆ ಐಡಿ, ಮತ್ತು ಅಂತಹ ವ್ಯಕ್ತಿಯು ಉದ್ದಿಮೆ / ಸಂಸ್ಥೆ / ಏಜೆನ್ಸಿಯಲ್ಲಿ ಹೊಂದಿದ ಸ್ಥಾನಮಾನ. | |
| 18. | ಉದ್ದಿಮೆ / ಸಂಸ್ಥೆ / ಏಜೆನ್ಸಿಗಳ ಕಳೆದ ಮೂರು ವರ್ಷಗಳಲ್ಲಿ ಮಾಡಿದ ಸರಬರಾಜು / ವ್ಯವಹಾರಗಳ ವಿವರಗಳು (ಇನ್‌ವಾಯಿಸ್‌ಗಳ ಪ್ರತಿ ಲಗತ್ತಿಸುವುದು) | |

ನಾನು / ನಾವು ಈ ಮೂಲಕ ಧೃಡೀಕರಿಸುವುದೇನೆಂದರೆ ಮೇಲೆ ನೀಡಿದ ಮಾಹಿತಿಗಳು ವಾಸ್ತವ ಮತ್ತು ಸತ್ಯ, ಮತ್ತು ನಾನು / ನಾವು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ದಿನಾಂಕ : 5.5.2006 ರ ಪ್ರಕಟಣೆಯನ್ನು ಓದಿದ್ದೇನೆ / ವೆ ಮತ್ತು ವಿವಿಧ ಬದ್ಧತೆ ಮತ್ತು ಶರ್ತಗಳನ್ನು ತಿಳಿದುಕೊಂಡಿದ್ದೇನೆ/ವೆ.

ಸ್ಥಳ :

ದಿನಾಂಕ: 5. .2006. ಅಧಿಕೃತ ವ್ಯಕ್ತಿಯ ಸಹಿ ಮತ್ತು ಮೊಹರು.

ಪಾಲಿಥೀನ್ ಚೀಲಗಳು / ಹಾಳೆಗಳು ಮತ್ತು ನೇಯ್ದ ಚೀಲಗಳನ್ನು ಸರಬರಾಜು ಮಾಡಲು ಅರ್ಹ ಉತ್ಪಾದಕರು / ಏಜೆನ್ಸಿ / ಸಂಸ್ಥೆಗಳ ಸಂಭಾವ್ಯ ಪಟ್ಟಿ ತಯಾರಿಸುವ ಬಗ್ಗೆ ಮತ್ತು ಪಾಲಿಥೀನ್ ಚೀಲಗಳು / ಹಾಳೆಗಳಿಗೆ ಪ್ರತಿ ಟನ್‌ಗೆ ದರ ಮತ್ತು ನೇಯ್ದ ಚೀಲಗಳಿಗೆ ಪ್ರತಿ ಸಾವಿರ ಚೀಲಗಳಿಗೆ ದರ ನಿಷ್ಕರ್ಷಿಸುವ ಬಗ್ಗೆ ಅರ್ಹತಾ ಪೂರ್ವ ಟೆಂಡರು.

ಸಫಲ ದರ ಟೆಂಡರುದಾರರಿಗೆ ಕರಾರಿನ ಶರ್ತಗಳ ಪ್ರಮುಖ ಲಕ್ಷಣಗಳು.

1) 2006-07ರ ಅರಣ್ಯ ನರ್ಸರಿ ಋತುಮಾನದಲ್ಲಿ ಯಾವುದೇ ಅರಣ್ಯ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ಬೇಡಿಕೆ ಪತ್ರ ಸ್ವೀಕೃತಿಯಾದ ಒಂದು ತಿಂಗಳಿನೊಳಗೆ ಸರಬರಾಜು ಮಾಡುವುದನ್ನು ಇನ್ನು ಮುಂದಕ್ಕೆ 'ಸರಬರಾಜುದಾರರು' ಎಂದು ಕರೆಯಲ್ಪಡುವ ಸಫಲ "ದರ ಟೆಂಡರುದಾರರು" ನಿಶ್ಚಿತಗೊಳಿಸತಕ್ಕದ್ದು.

2) 2006-07ರ ನರ್ಸರಿ ಋತುಮಾನ ಎಂದರೆ 1.4.2006 ರಿಂದ 31.3.2007ರ ಅಂತ್ಯದ ವರೆಗಿನ ಅವಧಿ.

3) ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು 2006-07ರ ನರ್ಸರಿ ಋತುಮಾನಕ್ಕೆ ಸಲ್ಲಿಸುವ ಬೇಡಿಕೆಯ ಪ್ರಮಾಣಕ್ಕೆ ಅನುಗುಣವಾಗಿ ಸರಬರಾಜನ್ನು ಮಾಡತಕ್ಕದ್ದು.

4) ಸರಬರಾಜು ಸರಕುಗಳನ್ನು ಕರಾರು ಪತ್ರಕ್ಕೆ ಅನುಬಂಧಿಸಿದ ಸಂಬಂಧಪಟ್ಟ ಅರಣ್ಯ ವಿಭಾಗಗಳ ಕೇಂದ್ರಸ್ಥಾನದಲ್ಲಿ ಸರಕನ್ನು ತಮ್ಮ ವೆಚ್ಚದಲ್ಲಿಯೇ ಸಾಗಿಸಿ ಸರಬರಾಜು ಮಾಡತಕ್ಕದ್ದು.

5) ಬೇಡಿಕೆ ಸಲ್ಲಿಸುವ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಮಾಡುವಂತಹ ತಪಾಸಣೆ / ತನಿಖೆ / ವಿಚಾರಣೆಯಲ್ಲಿ ಸರಬರಾಜು ಮಾಡಿದ ಸರಕು ಕಳಪೆ ಗುಣಮಟ್ಟದ್ದೆಂದು ಕಂಡು ಬಂದರೆ, ಸರಬರಾಜು ಸ್ವೀಕೃತಿಯಾದ 15 ದಿನಗಳೊಳಗೆ ಸಂಪೂರ್ಣ ಅಥವಾ ಭಾಗಶಃ ಸರಬರಾಜಾದ ಸರಕನ್ನು ತಿರಸ್ಕರಿಸುವ ಹಕ್ಕನ್ನು ಆಯಾ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಕಾಯ್ದಿರಿಸಲಾಗಿದೆ.

6) ಸರಬರಾಜುದಾರನು ಕರಾರು ಶರ್ತಗಳನ್ನು ಸಮರ್ಪಕವಾಗಿ ಈಡೇರಿಸುವ ಬಗ್ಗೆ ಭದ್ರತೆಯಾಗಿ ರೂ. 3,00,000-00 (ರೂ.ಮೂರು ಲಕ್ಷ) ಮೌಲ್ಯದ ಫಿಡೆಲಿಟಿ ಬಾಂಡ್/ಬ್ಯಾಂಕ್ ಗ್ಯಾರೆಂಟಿಯನ್ನು ಹಾಜರು ಪಡಿಸುವ ಮೂಲಕ ನಷ್ಟ ಬಂಧಿ ಮಾಡಿಕೊಡತಕ್ಕದ್ದು.

7) ಫಿಡೆಲಿಟಿ ಬಾಂಡ್ / ಬ್ಯಾಂಕ್ ಗ್ಯಾರೆಂಟಿಗಳು ಕರಾರುನಾಮೆಗೆ ಸಹಿ ಹಾಕಿದ ದಿನಾಂಕದಿಂದ ಎಪ್ರಿಲ್ 2007ರ ಅಂತ್ಯದವರೆಗೆ ಊರ್ಜಿತದಲ್ಲಿ ಇರತಕ್ಕದ್ದು ಮತ್ತು ಬೆಂಗಳೂರಿನ ಶಾಖೆ ಇರುವ ವಿಮಾ ಸಂಸ್ಥೆ/ರಾಷ್ಟ್ರೀಕೃತ ಬ್ಯಾಂಕುಗಳಿಂದ ನೀಡಿದ್ದಾಗಿರಬೇಕು.

8) ಯಾವುದೇ ಸಂಭಾವ್ಯ ಪಟ್ಟಿಯ ಸಫಲ ಟೆಂಡರು ಸರಬರಾಜುದಾರರು ಮೇಲಿನ ವೇಳಾ ಪಟ್ಟಿಗೆ ಬದ್ಧರಾಗಲು ವಿಫಲರಾದರೆ ಅಂತಹವರ ಫಿಡೆಲಿಟಿ ಬಾಂಡನ್ನು / ಬ್ಯಾಂಕ್ ಗ್ಯಾರೆಂಟಿಯನ್ನು ಮುಟ್ಟುಗೋಲು ಹಾಕಲಾಗುವುದು ಮತ್ತು ಮುಂದಿನ ಮೂರು ನರ್ಸರಿ ಋತುಮಾನಗಳಿಗೆ ಇಲಾಖೆಗೆ ಪಾಲಿಥೀನ್ ಚೀಲ / ಹಾಳೆ ಮತ್ತು ನೇಯ್ದ ಚೀಲಗಳ ಸರಬರಾಜಿನ ವಿಷಯದಲ್ಲಿ ಭಾಗಿಯಾಗಲು ಅನರ್ಹಗೊಳಿಸಲಾಗುವುದು.

9) ಸರಬರಾಜುಗಳು ಸ್ವೀಕೃತಿಯಾದ ತರುವಾಯ ಬೇಡಿಕೆ ನೀಡಿದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಬಿಲ್ಲುಗಳ ಪಾವತಿಯ ಬಗ್ಗೆ ಕ್ರಮ ಕೈಗೊಳ್ಳುವರು. ಸರಕಾರದಿಂದ ಅನುದಾನ ಬಿಡುಗಡೆಯ ಶರ್ತಕ್ಕೆ ಒಳಪಟ್ಟು, ಬೇಡಿಕೆ ನೀಡಿದ ಸರಕನ್ನು ಸರಬರಾಜು ಮಾಡಿರುವುದರಿಂದ ಉದ್ಭವಿಸುವ ಬಿಲ್ಲುಗಳನ್ನು ಸರಕು ಸ್ವೀಕೃತಿಯಾದ 90 ದಿನಗಳೊಳಗೆ ಪಾವತಿಸಲಾಗುವುದು.

10) ಕರ್ನಾಟಕ ಅರಣ್ಯ ಇಲಾಖೆಯು ಯಾವುದೇ ಹಣಕಾಸು ಸಂಸ್ಥೆಗೆ / ಬ್ಯಾಂಕಿಗೆ, ಕಚ್ಚಾ ಮಾಲು ಸರಬರಾಜು ಮಾಡುವ ಏಜೆನ್ಸಿಗೆ, ವಿದ್ಯುತ್ ಸರಬರಾಜು ಮಾಡುವ ಪ್ರಾಧಿಕಾರಕ್ಕೆ, ಮಾಲಿನ್ಯ ನಿಯಂತ್ರಣ ಮಂಡಳಿಗೆ, ನಗರ ಸಭೆಗಳಿಗೆ ಹೊಣೆಗಾರರಾಗುವುದಿಲ್ಲ. ಸಂಬಂಧಪಟ್ಟ ಸಂಘಟನೆಗಳಿಂದ ಅಡ್ಡಿ ನಿವಾರಣೆಯನ್ನು ಪಡೆಯುವುದು ಸಫಲ ದರ ಟೆಂಡರು ಉದ್ದಿಮೆ / ಸಂಸ್ಥೆ / ಏಜೆನ್ಸಿಯ ಜವಾಬ್ದಾರಿಯಾಗಿರುತ್ತದೆ. ಮೇಲಿನ ಯಾವುದೇ ಉಲ್ಲಂಘನೆಯಿಂದ ಸರಬರಾಜು ಮಾಡಲು ಅಡ್ಡಿ ಆತಂಕ ಉಂಟಾದರೆ ಉದ್ದಿಮೆ / ಸಂಸ್ಥೆ / ಏಜೆನ್ಸಿಯು ವೇಳಾ ಪಟ್ಟಿಯ ಪ್ರಕಾರ ಸರಬರಾಜು ಮಾಡಲು ಅಸಾಧ್ಯವಾದ ಕಾರಣ ಮುಂದಿಡಲು ಬರಲಾರದು.

11) ಉದ್ದಿಮೆ / ಸಂಸ್ಥೆ / ಏಜೆನ್ಸಿಯು ಯಾವುದೇ ಸಾರ್ವಜನಿಕ ಅಥವಾ ಖಾಸಗಿ ಸಂಸ್ಥೆಯೊಂದಿಗೆ ಮಾಡಿಕೊಳ್ಳುವ, ಯಾವುದೇ ಆರ್ಥಿಕ ಅಥವಾ ಇತರ ರೀತಿಯ ಬದ್ಧತೆಗಳಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಸರಬರಾಜು ಬೇಡಿಕೆ ಆದೇಶವನ್ನು ಕರ್ನಾಟಕ ಅರಣ್ಯ ಇಲಾಖೆಯ ಅಧಿಕಾರ ಪತ್ರವೆಂದು ಪರಿಗಣಿಸತಕ್ಕದ್ದಲ್ಲ. ಅಂತಹ ವ್ಯವಹಾರಗಳು ಸಂಬಂಧಪಟ್ಟ ಉದ್ದಿಮೆ / ಸಂಸ್ಥೆ / ಏಜೆನ್ಸಿಗಳ ಸ್ವಂತ ಜವಾಬ್ದಾರಿಯಲ್ಲಿ (risk) ಆಗಿರುತ್ತದೆ.

12) ಯಾವುದೇ ವಿವಾದಗಳು ಉಂಟಾದಲ್ಲಿ ಯಾವ ವೃತ್ತ ವ್ಯಾಪ್ತಿಯ ವಿಭಾಗಕ್ಕೆ ಸರಬರಾಜು ಮಾಡಲಾಗಿದೆಯೊ ಅಂತಹ ವೃತ್ತದ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಮೇಲ್ಮನವಿ ಸಲ್ಲಿಸಬಹುದು.

ಪಿ.ಆರ್. 251 ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ.

**ಆರ್ಥಿಕ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಆಇ 46 ವಾತೆಸಿ 2006, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2006.**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು, 1997ರಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ವಾಣಿಜ್ಯ ತೆರಿಗೆ ಇಲಾಖೆಯ ಗ್ರೂಪ್ 'ಎ' ವೃಂದದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಹುದ್ದೆಗೆ ಆಯ್ಕೆ ಮಾಡಿ, ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ: **Conf.25/2005-06/PSC, ದಿನಾಂಕ:** 28/2/2006 ರ ರಾಜ್ಯ ಪತ್ರದಲ್ಲಿ ಪ್ರಕಟಿಸಿದೆ. ಈ ಆಯ್ಕೆ ಪಟ್ಟಿಯನ್ವಯ ಈ ಕೆಳಕಂಡ ಅಭ್ಯರ್ಥಿಗಳನ್ನು ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ರೂ. **"7400-200-8800-260-10880-320-13120"** ರ ವೇತನ ಶ್ರೇಣಿಯ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಹುದ್ದೆಗೆ ಪರಿವೀಕ್ಷಣೆ ಮೇಲೆ (On Probation) ಈ ಮೂಲಕ ನೇಮಕ ಮಾಡಲಾಗಿದೆ.

| ಕ್ರ. ಸಂ. | ಹೆಸರು ಶ್ರೀಮತಿ/ಶ್ರೀ | ವಿಳಾಸ |
|---|---|---|
| 1. | ವೀರಭದ್ರ ಹಂಚಿನಾಳ | ವೀರಭದ್ರ ಹಂಚಿನಾಳ<br>ಬಿನ್ ಭೀಮಪ್ಪ, ಹುಲ್ಲೋಳಿ ಪೋಸ್ಟ್, ಹುಕ್ಕೇರಿ ತಾ:<br>ಬೆಳಗಾಂ- 591309. |
| 2. | ಶಿವಕುಮಾರ್ ಎಸ್. ಇಟಗಿ, | ಶಿವಕುಮಾರ್ ಎಸ್. ಇಟಗಿ,<br>C/o ಮಹಂತೇಶ್ ಬುಕ್ ಡಿಪೋ, ವಲ್ಲಭ ಬಾಯಿ ಚೌಕ್,<br>ಬಾಗಲಕೋಟೆ-587101. |
| 3. | ವಿರೂಪಾಕ್ಷ. ಕೆ.ಸಿ | ವಿರೂಪಾಕ್ಷ. ಕೆ.ಸಿ<br>ಕುರುವಂಗಿ ಪೋಸ್ಟ್, ಚಿಕ್ಕಮಗಳೂರು - 577102. |
| 4. | ಕೃಷ್ಣ ಕುಮಾರ್. ಟಿ.ಆರ್ | ಕೃಷ್ಣ ಕುಮಾರ್. ಟಿ.ಆರ್<br>ಬಿನ್ ರಾಜಣ್ಣ ನಾಯ್ಡು .ಟಿ,<br>ಸದರನ್ ಎಕ್ಸ್‌ಟೆನಷನ್, ಕೊಳ್ಳೇಗಾಲ,<br>ಚಾಮರಾಜನಗರ - 571440. |
| 5. | ಶಿವಕುಮಾರ್. ಹೆಚ್.ಆರ್ | ಶಿವಕುಮಾರ್. ಹೆಚ್.ಆರ್<br>ಬಿನ್ ರಾಮಯ್ಯ,<br>ಹಾಳೆ ಉಪ್ಪಾರಹಳ್ಳಿ ಹೊಸೂರು ಹೋಬಳಿ<br>ಗೌರಿಬಿದನೂರು ತಾ., ಕೋಲಾರ. |
| 6. | ಗಂಜಿ ದತ್ತಾತ್ರೇಯ | ಗಂಜಿ ದತ್ತಾತ್ರೇಯ,<br>ಬಿನ್ ಸೋಮಶೇಖರಪ್ಪ ಗಂಜಿ,<br>C/o ಎಸ್.ಎಸ್. ಗಂಜಿ, 8/3 ಲಟ್ಟಿಪೇಟೆ,<br>ಹಳೆ ಹುಬ್ಬಳ್ಳಿ - 580024. |
| 7. | ಪ್ರಕಾಶ್. ಡಿ.ಪಿ | ಪ್ರಕಾಶ್. ಡಿ.ಪಿ<br>ಬಿನ್ ಪರಮಶಿವಪ್ಪ. ಡಿ.ಎಂ.<br>ನಂ. 934, 21 ಮುಖ್ಯ ರಸ್ತೆ, ಜೆ.ಪಿ. ನಗರ,<br>2 ನೇ ಹಂತ, ಬೆಂಗಳೂರು - 78. |
| 8. | ಯಾಸ್ಮೀನ್ ಬೇಗಂ ವಾಲಿಕರ್ | ಯಾಸ್ಮೀನ್ ಬೇಗಂ ವಾಲಿಕರ್,<br>ಬಿನ್ ಜಿ.ಎಂ. ಓಲೇಕಾರ್,<br>ಜಿಲ್ಲಾ ಆಸ್ಪತ್ರೆ,<br>ಹಾವೇರಿ - 581110. |
| 9. | ಸುಲಕ್ಷಣ. ಎಸ್.ಎನ್ | ಸುಲಕ್ಷಣ. ಎಸ್.ಎನ್<br>ಬಿನ್ ಲೇಟ್ ಸದಾಶಿವ ನಾಯ್ಕ್,<br>ದೇವಿ ಸದನ ಮುದರಂಗಡಿ,<br>ಉಡುಪಿ ಜಿಲ್ಲೆ, ಪಿಲರ್ ಪೋಸ್ಟ್-574113. |

| | | |
|---|---|---|
| 10. | ಮೀರಾ ರಾಚಪ್ಪ ಆಲೂರ್ | ಮೀರಾ ರಾಚಪ್ಪ ಆಲೂರ್,<br>ನಂ. 1–1166/3–ಡಿ "ಶಾಂತ"<br>ಐವಾನ್–ಶಾಹಿ ಏರಿಯಾ,<br>ಗುಲ್ಬರ್ಗಾ – 585102. |
| 11. | ಯಶೋಧ. ಕೆ | ಯಶೋಧ. ಕೆ<br>ಬಿನ್ ಕೃಷ್ಣಮೂರ್ತಿ,<br>ಗಿರಿಧಾಮ, 4ನೇ ಕ್ರಾಸ್, ಉಪ್ಪರಹಳ್ಳಿ,<br>ತುಮಕೂರು– 572102. |
| 12. | ಲಿಂಗಣ್ಣ ಕುಚಬಾಳ | ಲಿಂಗಣ್ಣ ಕುಚಬಾಳ,<br>ಬಿನ್ ಗುರುಪಾದಪ್ಪ,,<br>C/o ಹೆಚ್.ಜಿ. ಗುಂಡಳ್ಳಿ, ಬಿಡಿಒ ಕ್ವಾರ್ಟರ್ಸ್,<br>ಅಧ್ಯಾಪಕ ನಗರ, ಹುಬ್ಬಳ್ಳಿ– 580032. |
| 13. | ಎನ್.ಎಸ್. ನಾಗಸ್ವಾಮಿ | ಎನ್.ಎಸ್. ನಾಗಸ್ವಾಮಿ,<br>ಬಿನ್ ಶಿವಮೂರ್ತಿ,<br>ಕಾಳಿಕಾಂಭ ದೇವಸ್ಥಾನ ಬೀದಿ,<br>ನಾಗಮಂಗಲ, ಮಂಡ್ಯ– 571432. |
| 14. | ಡಾ:ಉಮಾಕಾಂತ್. ಆರ್.ಎಸ್ | ಡಾ: ಉಮಾಕಾಂತ್. ಆರ್.ಎಸ್<br>ಬಿನ್ ಶ್ರೀಧರ್ ರಾವ್. ಆರ್.ಎಸ್.<br>1544, ವಿನೋಭ ರಸ್ತೆ ಉತ್ತರ 3ನೇ ಕ್ರಾಸ್,<br>ದೇವರಾಜ ಮೊಹಲ್ಲಾ, ಮೈಸೂರು– 570001. |
| 15. | ವಿಜಯ ಕುಮಾರ್. ಬಿ.ಸಿ | ವಿಜಯ ಕುಮಾರ್. ಬಿ.ಸಿ<br>ಬಿನ್ ಚೆನ್ನೇಗೌಡ. ಸಿ<br>4ನೇ ಕ್ರಾಸ್, ನಂ. 1914, ಶುಭಾಷನಗರ,<br>ಮಂಡ್ಯ 571401. |
| 16. | ಶಬ್ಬೀರ್ ಭಾಷ ಗಂಟಿ, | ಶಬ್ಬೀರ್ ಭಾಷ ಗಂಟಿ,<br>ಬಿನ್ ಜಿ. ರಾಜವಲಿ ಸಾಬ್,<br>ಐ–ವಾರ್ಡ್ ಮೈಲಾರ ರಸ್ತೆ ಹೂವಿನ<br>ಹಡಗಲಿ ಪೋಸ್ಟ್, ಬಳ್ಳಾರಿ – 583219. |
| 17. | ರೇಣುಕಾನಂದ. ಡಿ.ಆರ್. | ರೇಣುಕಾನಂದ. ಡಿ.ಆರ್.<br>ಬಿನ್ ರೇವಣಸಿದ್ದಪ್ಪ C/o ಎಂ. ಪುಟ್ಟ,<br>ಸುಬ್ಬಣ್ಣ ನಂ. 138/ಸಿ, 9ನೇ ಕ್ರಾಸ್,<br>3 ನೇ ಮೇನ್, ವಿವೇಕನಗರ,<br>ಬೆಂಗಳೂರು– 560047. |
| 18. | ಶ್ರೀನಿವಾಸ. ಎಸ್.ಎಂ. | ಶ್ರೀನಿವಾಸ. ಎಸ್.ಎಂ.<br>ಬಿನ್ ಮುನಿಲಕ್ಕಪ್ಪ,ಬಮಾಲೂರು ಪೋಸ್ಟ್,<br>ಸಿದ್ದಲಘಟ್ಟ ತಾ., ಕೋಲಾರ – 562102. |
| 19. | ಉಮಾ. ಕೆ.ಎ | ಉಮಾ. ಕೆ.ಎ<br>ನಂ. 97/3, ಒಂದನೇ ಮಹಡಿ,<br>ರಾವ್ ಬಹದ್ದೂರ್, ಹಯವದನ ರಸ್ತೆ,<br>ಬುಲ್ ಟೆಂಪಲ್ ಕ್ರಾಸ್,<br>ಗವಿಪುರಂ ಎಕ್ಸಟೆನಷನ್, ಬೆಂಗಳೂರು–19. |
| 20. | ಕುಮಾರ್ ನಾಯಕ್. ಜಿ | ಕುಮಾರ್ ನಾಯಕ್. ಜಿ<br>ಬಿನ್ ಗೋಪ್ಯ ನಾಯಕ್,<br>ಕಲ್ಕೆರೆ ಪೋಸ್ಟ್, ಹೊಳಲ್ಕೆರೆ ತಾ.,<br>ಚಿತ್ರದುರ್ಗ – 577531. |

| | | |
|---|---|---|
| 21. | ಶರತ್. ಬಿ | ಶರತ್. ಬಿ<br>ಬಿನ್ ಭೀಮಯ್ಯ. ಬಿ, ನಂ. 52,<br>ಮೊದಲನೇ ಮಹಡಿ, 5 ನೇ ಕ್ರಾಸ್,<br>ಪಿ.ಎಫ್. ಲೇಔಟ್, ಮಾರುತಿ ಮಂದಿರ ಹತ್ತಿರ,<br>ವಿಜಯನಗರ, ಬೆಂಗಳೂರು– 40. |
| 22. | ಸೋನಾಲ . ಜಿ. ನಾಯಕ್ | ಸೋನಾಲ . ಜಿ. ನಾಯಕ್<br>ಬಿನ್ ಕೆ.ಆರ್. ಗಂಗಾಧರ್ ನಾಯಕ್<br>320, 3 ನೇ ಹಂತ, 4 ನೇ ಬ್ಲಾಕ್,<br>ಬಸವೇಶ್ವರನಗರ, ಬೆಂಗಳೂರು – 79. |
| 23. | ಸೀಮಾ ನಾಯಕ್. ಬಿ | ಸೀಮಾ ನಾಯಕ್. ಬಿ<br>ನಂ. 3, 37ನೇ ಮೇನ್,<br>ಬಿ.ಟಿ.ಎಂ. 2 ನೇ ಹಂತ,<br>ಬೆಂಗಳೂರು – 68. |
| 24. | ಮಂಜುನಾಥ. ಕೆ.ಎಂ. | ಮಂಜುನಾಥ. ಕೆ.ಎಂ.<br>C/o ಚೆಲುವರಾಜ್ ನಂ. 1125,<br>ಗರಡಿ ರಸ್ತೆ, ಇಟ್ಟಿಗೆಗೂಡ್,<br>ಮೈಸೂರು – 570010. |
| 25. | ಶಂಭು ಭಟ್. ಡಿ | ಶಂಭು ಭಟ್. ಡಿ<br>ಬಿನ್ ಶಂಕರ ಭಟ್. ಡಿ<br>ದೇವಮಣಿ ಹೌಸ್, ಬೆಟ್ಟಪಾಡಿ ಪೋಸ್ಟ್,<br>ಪುತ್ತೂರು, ಮಂಗಳೂರು – 574259. |

ಈ ನೇಮಕಾತಿಯು ಅಭ್ಯರ್ಥಿಗಳ ಆಯ್ಕೆಪಟ್ಟಿಗೆ ಸಂಬಂಧಿಸಿದಂತೆ ಭಾರತದ ಸರ್ವೋಚ್ಚ ನ್ಯಾಯಾಲಯದ ಮುಂದಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/1999, ಕರ್ನಾಟಕ ಉಚ್ಛ ನ್ಯಾಯಾಲಯದ ಮುಂದಿರುವ ರಿಟ್ ಅರ್ಜಿ ಸಂಖ್ಯೆ: 27140/2005 ಮತ್ತು ಕರ್ನಾಟಕ ಆಡಳಿತ ನ್ಯಾಯಮಂಡಳಿ ಮುಂದಿರುವ ಅರ್ಜಿಗಳ ಸಂಖ್ಯೆ: 4184/2003, 1512/2003, 1741/2003 ಮತ್ತು 1171/2006ಗಳಲ್ಲಿ ನ್ಯಾಯಾಲಯಗಳು ನೀಡಬಹುದಾದ ತೀರ್ಪಿಗೆ ಒಳಪಟ್ಟಿರುತ್ತದೆ.

ಈ ಎಲ್ಲಾ ಅಭ್ಯರ್ಥಿಗಳು ಎರಡು ವರ್ಷಗಳ ಅವಧಿಯಲ್ಲಿ ಪರೀಕ್ಷಾರ್ಥ ತರಬೇತಿಯಲ್ಲಿರುತ್ತಾರೆ. ಈ ಅವಧಿಯಲ್ಲಾದ 1974ರ ಕರ್ನಾಟಕ ನಾಗರೀಕ ಸೇವೆಗಳು (ಸೇವೆ ಮತ್ತು ಕನ್ನಡ ಭಾಷೆ ಪರೀಕ್ಷೆಗಳು) ನಿಯಮಾವಳಿಯಲ್ಲಿ ನಿಗಧಿಪಡಿಸಿರುವ ಕನ್ನಡ ಪರೀಕ್ಷೆ ಹಾಗೂ ಸಹಾಯಕ ವಾಣಿಜ್ಯ ತೆರಿಗೆ ಆಯುಕ್ತರ ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು ಮತ್ತು ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸಬೇಕು.

ಈ ಅಭ್ಯರ್ಥಿಗಳ ನೇಮಕಾತಿ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮ/ಆದೇಶದ ಅಧೀನಕ್ಕೆ ಒಳಪಟ್ಟಿರುತ್ತದೆ.

ಈ ಅಧಿಸೂಚನೆಯನ್ನು ನೊಂದಾಯಿತ ಅಂಚೆ ಮೂಲಕ ರವಾನಿಸಿದ ದಿನಾಂಕದಿಂದ 15 ದಿನಗಳೊಳಗೆ ಅಭ್ಯರ್ಥಿಗಳು ಆಯುಕ್ತರು, ವಾಣಿಜ್ಯ ತೆರಿಗೆಗಳ ಕಾರ್ಯಾಲಯ, ಗಾಂಧಿನಗರ, ಬೆಂಗಳೂರು, ಇವರಲ್ಲಿ ಕರ್ತವ್ಯದ ಮೇಲೆ ಹಾಜರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 252

**ಎಸ್.ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ವಾ.ತೆ.–2).

**FORM IV**

**(See Rule 12)**

**NOTICE**

It is hereby notified that the undersigned has changed his name from **KIRAN KUMAR B.M.** to **ROHITH SHETTY.**

P.D. 103

**KIRAN KUMAR B.M.**

**Commissioner of Police, Hubli - Dharwar city.**

**FORM I**

**(See Rule 9)**

**NOTIFICATION**

Shri **Kantappa Hanumappa Madar** working as Civil Police Constable in the Karnataka Police Department of Dharwad Suburban Police Station is permitted to change his name to **Kantappa Hanumappa Nellur.**

Commissioner of Police,
Hubli - Dharwad.

P.D. 101

**Department of Health & Family Welfare Services**

**FORM I**

**(See rule 9)**

**NOTIFICATION**

Shri **MUTTHAPPA YELLAPPA CHALAWADI** working as Jr. Health Worker (Male) in the Health & Family Welfare Department of / Office of Dist. T.B. Office, Bijapur is permitted to change his / her name to **MUTTHAPPA YELLAPPA HOSAKOTE.**

Department of Health &
Family Welfare Services.

P.D. 102

**IN THE COURT OF THE IV ADDL. CITY CIVIL JUDGE : MAYOHALL, BANGALORE**

**G & W.C. NO. 15015 / 2005,**

| **PETITIONER** | **V/s** | **RESPONDENT** |
|---|---|---|
| 1. Kum. K. Anu, 18 yrs., | | 1. Smt. Vijaya, aged about 50 years, |
| 2. Master K. Arun, 16 yrs., | | W/o Late S. John |
| 3. Kum. Anitha 14 yrs., | | 2. Mr. Suresh, |
| All are children of Late Kumaresan | | Aged about 25 years |
| R/o Lakshminarayanpuram, | | 3. Mr. Michael, |
| Bangalore - 21 | | Aged about 22 years, |
| Petitioners 2 and 3 are minor | | Both are sons of late S. John |
| represented | | All are residing at No. 14, |
| by Petitioner No. 1 | | New Mint Line, Austin Town, Bangalore. |

**PUBLIC NOTICE**

Notice is hereby given that a petition has been made to this court Under Section 7 and 8 of the Guardian and Wards Act, prays for grant of Guardianship Certificate and to alienate the property.

The Court has fixed 31/05/2006 for hearing of the Petition. All persons claiming to have interest in the Property may come and participate in the proceedings before grant of permission to alienate the property.

**SCHEDULE**

Residential property No. 14, New Cement Line, Austin Town, Bangalore - 47

**Bounded on :**

East, North and South by Quarter No. 50, 53 and 49 and West by Road.

Given under my hand and the seal of the Court, this the 8th day of May, 2006.

By Order of the Court,
Asst. Registrar,
City Civil Court, Mayohall, Bangalore

P.D. 55

**IN THE COURT OF THE IV ADDL. CITY CIVIL JUDGE, MAYOHALL, BANGALORE**

**P & S.C. NO. 15019 / 2006,**

| **PETITIONER** | **V/s** | **RESPONDENTS** |
|---|---|---|
| N. VASANTHAKUMARI,<br>S/o Late K. Nandagopal<br>Aged about 50 years,<br>No. 452/1, Lakshmi Nilaya,<br>III Cross, L.B. Shastrinagar,<br>Vimanapura,<br>Bangalore - 17 | | 1. Smt. Vijayalakshmi,<br>W/o Ramesh Babu<br>2. Smt. Kalavathy<br>3. Smt. Seethalakshmi<br>W/o K. Nandagopal<br>R1 to R3 are R/o 452/1,<br>Lakshmi Nilaya, 3rd Cross,<br>L.B. Shastrinagar, Vimanapura,<br>Bangalore - 17. |

**PUBLIC NOTICE**

Notice is hereby given that, the petition under Sec 278 of the Indian Succession Act, for grant of Succession Certificate for grant of Probate in respect of the Will of N. Sivanandam who died at Bangalore on 22/02/2006.

Be it known that No caveat has been entered and the said petition is posted for hearing on 01/06/2006. All persons claming to have any interest may come and see the proceeding before grant of Probate of the Will Late N. Sivanandam.

Given under my hand and the seal of the Court, this the 8th day of May, 2006.

By Order of the Court,

P.D. 56

Asst. Registrar,

City Civil Court, Mayohall Unit, Bangalore

**KARNATAKA STATE BOARD OF WAKFS**

**"DARUL AWKAF", No. 6, Cunningham Road,**

**CERTIFICATE OF REGISTRATION**

**No. KTW / REG / 47 / KPL / 2001 - 2002, Bangalore-52, Dated: 3rd December 2001**

It is hereby certified that the Wakf described hereunder is registered and brought on to the Register of Wakfs in accordance with Section 36 of the Wakf Act, 1995.

| Sl. No. of Kitabul Awkaf | Name, Class & Description of the Wakfs | Particulars of Wakf properties | Name of the Muthawalli |
|---|---|---|---|
| 39 | Muslim Khabrasthan (Sunni) Pannapur Village, Gangavathi Taluk, Koppal District. | Area - 1<br>Sy.No. 1/5 Ext 2-01 Acres<br>BOUNDARIES<br>NORTH : Chanal (Nala)<br>SOUTH : Village locality<br>EAST : Village main Road<br>WEST : Goutan Area. | Muslim Khabrastan (Sunni) Pannapur Village. Gangavathi Taluk represented by its President. |

Chief Executive Officer,

P.D. 57

Karnataka State Board of Wakfs

**ಪ್ರಾಚಾರ್ಯರು, ಕೈಗಾರಿಕಾ ತರಬೇತಿ ಸಂಸ್ಥೆ, ತರೀಕೆರೆ**

**ಪ್ರಕಟಣೆ ಸಂಖ್ಯೆ: ಕೈತಸಂ / ತ / ಖರೀದಿ / ಸ್ಕ್ರಾಪ್ ಸಿಆರ್-1 / 05-06, ದಿನಾಂಕ: 20ನೇ ಏಪ್ರಿಲ್ 2006.**

ಸರ್ಕಾರಿ ಕೈಗಾರಿಕಾ ತರಭೇತಿ ಸಂಸ್ಥೆ ತರೀಕೆರೆ ಇಲ್ಲಿ ಉಗ್ರಾಣದಲ್ಲಿರುವ ಈ ಕೆಳಗಿನ ನಿರುಪಯುಕ್ತ : ಅನುಪಯುಕ್ತ ವಸ್ತುಗಳನ್ನು ದಿನಾಂಕ 15-06-2006 ರಂದು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಹೆಚ್ಚಿನ ಮಾಹಿತಿಗಾಗಿ ಪ್ರಾಚಾರ್ಯರು ಸರ್ಕಾರಿ ಕೈಗಾರಿಕಾ ತರಭೇತಿ ಸಂಸ್ಥೆ, ಗುರುಭವನ, ಬಿ.ಹೆಚ್. ರಸ್ತೆ, ತರೀಕೆರೆ ಇವರನ್ನು ಸಂಪರ್ಕಿಸಲು ಸೂಚಿಸಲಾಗಿದೆ.

**ಸಾಮಾಗ್ರಿಗಳ ವಿವರ**

1) ಎಂ.ಎಸ್. ಸ್ಕ್ರಾಪ್ : ಅಂದಾಜು 700 ಕೆ.ಜಿ.
2) ಹ್ಯಾಂಡ್ ಹ್ಯಾಕ್ಸ್ ಬ್ಲೇಡ್ : ಅಂದಾಜು 25 ಕೆ.ಜಿ.
3) ಎಲೆಕ್ಟ್ರಿಕಲ್ ಅಲ್ಯುಮಿನಿಯಂ : ಅಂದಾಜು 10 ಕೆ.ಜಿ.
ಮತ್ತು ಕಾಪರ್ ವೈರ್ ಸ್ಕ್ರಾಪ್.

ಪ್ರಾಚಾರ್ಯರು,
ಕೈಗಾರಿಕಾ ತರಬೇತಿ ಸಂಸ್ಥೆ, ತರೀಕೆರೆ.

ಪಿ.ಆರ್. 242

**ನಿಯಂತ್ರಕರ ಕಚೇರಿ, ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ರಾಲೆಪ / 15 / ಸಿನೇಇ / 2001, ದಿನಾಂಕ: 24ನೇ ಏಪ್ರಿಲ್ 2006.**

ನೇರ ನೇಮಕಾತಿ ಮೂಲಕ ತುಂಬಲು ಗುರುತಿಸಿರುವ ಬ್ಯಾಕ್‌ಲಾಗ್ ಪರಿಶಿಷ್ಟ ಜಾತಿ ಅರ್ಹತಾ ಶ್ರೇಷ್ಠತೆಯ ಅಭ್ಯರ್ಥಿಗಳ ಬೆರಳಚ್ಚುಗಾರರ ತಾತ್ಕಾಲಿಕ ಆಯ್ಕೆ ಪಟ್ಟಿ.

| ಕ್ರ. ಸಂ. | ಹೆಸರು / ವಿಳಾಸ | ಜನ್ಮ ದಿನಾಂಕ | ವಯಸ್ಸು ವ/ತಿಂ/ದಿ | ಎಸ್.ಎಸ್.ಎಲ್.ಸಿ. ಶೇಕಡಾವಾರು ಅಂಕ | ಬೆರಳಚ್ಚು ಶೇಕಡಾವಾರು ಅಂಕ | ಒಟ್ಟು | ಸರಾಸರಿ |
|---|---|---|---|---|---|---|---|
| **ಮುಖ್ಯ ಆಯ್ಕೆ ಪಟ್ಟಿ** | | | | | | | |
| 1 | ಚಂದ್ರಕಾಂತ ಕೆ. ಸಂಗೋಳಗಿ, ತಂದೆ ಕಾಶಪ್ಪ, ಪೂಜಾ ಕಾಲೋನಿ, ಪ್ಲಾಟ್ ನಂ. 189, ಕೊಸನುರ್ ರೋಡ್, ಗುಲ್ಬರ್ಗಾ - 585106. | 01-10-1968 | 37-4-26 | 59.50 | 83.50 | 143.00 | 71.50 |
| 2 | ನಿರ್ಮಲಾದೇವಿ ತಂದೆ ಹುಚ್ಚಪ್ಪ, ಧನ್ವಂತರಿ ಕಾಲೋನಿ, ಶ್ರೀರಂಗ ನಿಲಯ, ಭಾಗ್ಯ ನಗರ, ಜಿಲ್ಲೆ / ತಾಲ್ಲೂಕು ಕೊಪ್ಪಳ | 01-07-1973 | 32-8-13 | 59.00 | 79.50 | 138.50 | 69.25 |
| **ಹೆಚ್ಚುವರಿ ಆಯ್ಕೆ ಪಟ್ಟಿ** | | | | | | | |
| 1 | ವಿಜಯ ಕುಮಾರ್ ತಂದೆ ಸಿದ್ರಾಮ, C/O ಶ್ರೀಮತಿ ಆರತಿ, ಬೆರಳಚ್ಚುಗಾರರು, ಜಿಲ್ಲಾಧಿಕಾರಿಗಳ ಕಛೇರಿ, ಬೀದರ್ - 585401. | 05-06-1972 | 33-8-19 | 50.50 | 81.50 | 132.00 | 66.00 |
| 2 | ಅನಿಲ್ ಅಲ್ದಿ ತಂದೆ ಮಹದೇವಪ್ಪ, ಎ.ಎಂ. ಅಲ್ದಿ ಕಂಠೆಪ್ಪ ಪ್ಲಾಟ್, ಲಕ್ಷ್ಮಿ ನಗರ, ಸಿಂದಗಿ ತಾಲ್ಲೂಕು, ಬಿಜಾಪುರ ಜಿಲ್ಲೆ - 586128 | 22-07-1976 | 29-06-28 | 53.50 | 78.00 | 131.50 | 65.75 |

ನಿಯಂತ್ರಕರು,
ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು.

ಪಿ.ಆರ್. 236

## ಕಾರ್ಯಪಾಲಕ ಅಭಿಯಂತರರವರ ಕಛೇರಿ, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ, ಉಡುಪಿ

### ಟೆಂಡರು ಪ್ರಕಟಣೆ

**ನಂ: ಜಿ.ಎನ್.ಎಲ್. / ಎನ್.ಐ.ಟಿ. / ಯು.ಡಿ.ಎನ್. / 2005-2006 / ಜೆಇ, ದಿನಾಂಕ: 27ನೇ ಏಪ್ರಿಲ್ 2006.**

ಈ ಕೆಳಗಿನ ಕೆಲಸಕ್ಕಾಗಿ ಪ್ರತ್ಯೇಕ ಮೊಹರಾದ ಟೆಂಡರನ್ನು ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿಸಲಾದ ಅರ್ಹ ದರ್ಜೆಯ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿ ನಿಯಮಿತ ಫಾರಂನಲ್ಲಿ ದ್ವಿ ಪ್ರತಿಯಲ್ಲಿ ಆಹ್ವಾನಿಸಲಾಗಿದೆ. ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ, ಉಡುಪಿ ಇವರು ದಿನಾಂಕ 26.05.06 ರ ಸಂಜೆ 4.00 ಗಂಟೆಯವರೆಗೆ ಟೆಂಡರನ್ನು ಸ್ವೀಕರಿಸುವರು. ಸಾಧ್ಯವಾದಲ್ಲಿ ಟೆಂಡರನ್ನು ಅದೇ ದಿನ ತೆರೆಯಲಾಗುವುದು.

ಖಾಲಿ ಟೆಂಡರು ಫಾರಂಗಳಿಗೆ ಅರ್ಜಿಗಳನ್ನು ನಿಗಧಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂದಿರುಗಿಸಲಾಗುವುದಿಲ್ಲ) ದಿನಾಂಕ 25.05.06 ರವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಅರ್ಜಿ ಜೊತೆಗೆ ಗುತ್ತಿಗೆದಾರರು ಅವರ ರಿಜಿಸ್ಟ್ರೇಶನ್‌ನ ಸರ್ಟಿಫೈಡ್ ಪ್ರತಿಯನ್ನು ಸಲ್ಲಿಸತಕ್ಕದ್ದು, ಖಾಲಿ ಟೆಂಡರು ಫಾರಂಗಳನ್ನು ಈ ಕಛೇರಿಯಲ್ಲಿ ದಿನಾಂಕ 25.05.06 ರವರೆಗೆ ನೀಡಲಾಗುವುದು.

**ಸೂಚನೆಗಳು :**

1) ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
2) ಇಎಂಡಿಯನ್ನು ಪ್ಲಡ್ಜ್ ಮಾಡಲಾದ ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್, ಬ್ಯಾಂಕ್‌ಗ್ಯಾರಂಟಿ, ಕಾಲ್‌ಡೆಪೋಸಿಟ್ / ಎಫ್.ಡಿ.ಆರ್, ಅಥವಾ ಡಿಮಾಂಡ್ ಡ್ರಾಫ್ಟ್, ರೂಪದಲ್ಲಿ ಸಲ್ಲಿಸುವುದು.
3) ಕಾಮಗಾರಿಗೆ ಬೇಕಾದ ಉಕ್ಕು ಸಿಮೆಂಟನ್ನು ಗುತ್ತಿಗೆದಾರರೇ ಸ್ವತಃ ಒದಗಿಸಿಕೊಳ್ಳತಕ್ಕದ್ದು. ಇದನ್ನು ಪರೀಕ್ಷೆ ಮಾಡಿಸಿ ಫಲಿತಾಂಶವು ಐ.ಎಸ್.ಎಸ್. ಗುಣಮಟ್ಟಕ್ಕೆ ಇರುವುದನ್ನು ಖಚಿತಪಡಿಸಿ ಕೆಲಸಕ್ಕೆ ಉಪಯೋಗಿಸಿಕೊಳ್ಳತಕ್ಕದ್ದು. ಈ ಅಂಶವನ್ನು ಗುತ್ತಿಗೆದಾರರು ಟೆಂಡರು ಸಲ್ಲಿಸುವಾಗ ಗಮನಿಸುವುದು.

**ಲೆಕ್ಕ ಶೀರ್ಷಿಕೆ 4202 ಶಿಕ್ಷಣ ಮತ್ತು ಸಂಸ್ಕೃತಿ ಮೇಲಣ ಬಂಡವಾಳ ವೆಚ್ಚ**

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಅಂದಾಜು ಮೊತ್ತ | ಮುಂಗಡ ಠೇವಣಿ (ಇಎಂಡಿ) ರೂ. | ಕಾಮಗಾರಿ ಮುಗಿಸಲು ಕಾಲಮಿತಿ (ಮಳೆಗಾಲ ಹೊರತು ಪಡಿಸಿ) | ಟೆಂಡರ್ ನಮೂನೆ | ಟೆಂಡರ್ (ಶೆಡ್ಯೂಲ್ ಬೆಲೆ) | ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಉಡುಪಿ ತಾಲ್ಲೂಕು ಕಾಪುವಿನಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡ ನಿರ್ಮಾಣ (2ನೇ ಹಂತ) | ರೂ. 40,69,826.54/- | ರೂ. 40,700/- | 8 ತಿಂಗಳು | ದರವಾರು | ರೂ. 3,375/- | 1ನೇ ದರ್ಜೆ ಗುತ್ತಿಗೆದಾರರು |

ಹೆಚ್ಚಿನ ವಿವರಗಳಿಗೆ ಕಛೇರಿಯನ್ನು ಸಂಪರ್ಕಿಸಬಹುದಾಗಿದೆ.

ಕಾರ್ಯಪಾಲಕ ಇಂಜಿನಿಯರ್,
ಲೋಕೋಪಯೊಗಿ ವಿಭಾಗ,
ಉಡುಪಿ - 576 101.

ಪಿ.ಆರ್. 247

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಕಾರ್ಯನಿರ್ವಾಹಕ ಅಭಿಯಂತರರ ಕಚೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

ಟೆಂಡರ್

ಅವಧಿ ವಿಸ್ತರಣೆ

**ಕ್ರ.ಸಂ.ಸನೀವಿ / ಬೆಳಗಾವಿ / ಜೆ.ಇ. / ಟೆಂಡರ್ / 06-07 / 1155, ದಿನಾಂಕ: 05ನೇ ಮೇ 2006.**

ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂ: ಸ ನೀ ವಿ / ಬೆಳಗಾಂವಿ / ಜೀಇ / ಟೆಂಡರ್ / 05-06 / 404 ದಿನಾಂಕ: 13.02.2006 ರಲ್ಲಿ ಆಹ್ವಾನಿಸಲಾದ ಟೆಂಡರಿನ ದಿನಾಂಕಗಳನ್ನು ಈ ಕೆಳಗಿನಂತೆ ಮುಂದೂಡಲಾಗಿದೆ.

**ಕಾಮಗಾರಿಯ ವಿವರಣೆ**

| ಅ.ನಂ | ಕೆಲಸದ ಹೆಸರು |
|---|---|
| 1 | 2 |
| 1 | ರಾಮದುರ್ಗ ತಾಲ್ಲೂಕಿನ ಭಾಗೋಜಿ ಕೊಪ್ಪದ ಹತ್ತಿರ ಇಂಗು ಕೆರೆ ನಿರ್ಮಾಣ |
| 2 | ರಾಮದುರ್ಗ ತಾಲ್ಲೂಕಿನ ಹುಲಕುಂದ ಹತ್ತಿರ ಇಂಗು ಕೆರೆ ನಿರ್ಮಾಣ |
| 3 | ಅಥಣಿ ತಾಲ್ಲೂಕಿನ ಹಿರೆಹಳ್ಳ ಅಡ್ಡವಾಗಿ ಸುಟ್ಟಟ್ಟಿ (ಶಿವನೂರ) ಹತ್ತಿರ ಬ್ಯಾರೇಜ ನಿರ್ಮಾಣ |
| 4 | ಹುಕ್ಕೇರಿ ತಾಲ್ಲೂಕಿನ ಯಲಿಮುನವಳ್ಳಿ ಹತ್ತಿರ (ಬಸವಣ್ಣ ಕೆರೆ) ಸ. ನೀ. ಕೆರೆ ನಿರ್ಮಾಣ |
| 5 | ಚಿಕ್ಕೋಡಿ ತಾಲ್ಲೂಕಿನ ಮೀರಾಪುಹಟ್ಟಿ ಲಕ್ಷ್ಮೀಕೊಡಿ ಹತ್ತಿರ ಇಂಗು ಕೆರೆ ನಿರ್ಮಾಣ |

1. ಸದರಿ ಕಾಮಗಾರಿಗಳ ಟೆಂಡರ್ ಫಾರ್ಮಗಳಿಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ :
2. ಖುಲ್ಲಾ ಟೆಂಡರ್ ಫಾರ್ಮಗಳನ್ನು ನೀಡುವ ದಿನಾಂಕ :
3. ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ :

} ಮುಂದಿನ ಆದೇಶದವರೆಗೆ ಮುಂದೂಡಲಾಗಿದೆ.

(ಸಾಧ್ಯವಾದಲ್ಲಿ ಅಂದೇ ಟೆಂಡರ್‌ಗಳನ್ನು ತೆರೆಯಲಾಗುವುದು).

**ಬಾಕಿ ಉಪವಿಧಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.**

**ಮನೋಹರ. ರಾ. ವಡ್ಡರ**
ಕಾರ್ಯನಿರ್ವಾಹಕ ಇಂಜಿನೀಯರ್,
ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

ಪಿ.ಆರ್. 248

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಕಾರ್ಯನಿರ್ವಾಹಕ ಅಭಿಯಂತರರ ಕಚೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

ಟೆಂಡರ್

ಅವಧಿ ವಿಸ್ತರಣೆ

**ಕ್ರ.ಸಂ.ಸನೀವಿ / ಬೆಳಗಾವಿ / ಜೆ.ಇ. / ಟೆಂಡರ್ / 06-07 / 1156, ದಿನಾಂಕ: 05ನೇ ಮೇ 2006.**

ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂ: ಸ ನೀ ವಿ / ಬೆಳಗಾಂವಿ / ಜೀಇ / ಟೆಂಡರ್ / 05-06 / 405 ದಿನಾಂಕ: 13.02.2006 ರಲ್ಲಿ ಆಹ್ವಾನಿಸಲಾದ ಟೆಂಡರಿನ ದಿನಾಂಕಗಳನ್ನು ಈ ಕೆಳಗಿನಂತೆ ಮುಂದೂಡಲಾಗಿದೆ.

**ಕಾಮಗಾರಿಯ ವಿವರಣೆ**

| ಅ.ನಂ | ಕೆಲಸದ ಹೆಸರು |
|---|---|
| 1 | ಚಿಕ್ಕೋಡಿ ತಾಲ್ಲೂಕಿನ ವಾಳ್ಕಿ ಹತ್ತಿರ ಇಂಗು ಕೆರೆ ಸುಧಾರಣೆ |
| 2 | ಬೆಳಗಾವಿ ತಾಲ್ಲೂಕಿನ ಸಾಂವಗಾಂವ ಕೆರೆ ಸುಧಾರಣೆ |

1. ಸದರಿ ಕಾಮಗಾರಿಗಳ ಟೆಂಡರ್ ಫಾರ್ಮಗಳಿಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ :
2. ಖುಲ್ಲಾ ಟೆಂಡರ್ ಫಾರ್ಮಗಳನ್ನು ನೀಡುವ ದಿನಾಂಕ :
3. ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ :

} ಮುಂದಿನ ಆದೇಶದವರೆಗೆ ಮುಂದೂಡಲಾಗಿದೆ.

(ಸಾಧ್ಯವಾದಲ್ಲಿ ಅಂದೇ ಟೆಂಡರ್‌ಗಳನ್ನು ತೆರೆಯಲಾಗುವುದು).

**ಬಾಕಿ ಉಪವಿಧಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.**

**ಮನೋಹರ. ರಾ. ವಡ್ಡರ**
ಕಾರ್ಯನಿರ್ವಾಹಕ ಇಂಜಿನೀಯರ್,
ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

ಪಿ.ಆರ್. 253

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಕಾರ್ಯನಿರ್ವಾಹಕ ಅಭಿಯಂತರರ ಕಚೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

ಟೆಂಡರ್

ಅವಧಿ ವಿಸ್ತರಣೆ (ದ್ವಿಲಕೋಟೆ ಪದ್ಧತಿ)

**ಕ್ರ.ಸಂ.ಸನೀವಿ / ಬೆಳಗಾವಿ / ಜೆ.ಇ. / ಟೆಂಡರ್ / 06-07 / 1157, ದಿನಾಂಕ: 05ನೇ ಮೇ 2006.**

ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂ: ಸ ನೀ ವಿ / ಬೆಳಗಾಂವಿ / ಜೀಇ / ಟೆಂಡರ್ / 05-06 / 431 ದಿನಾಂಕ: 17.02.2006 ರಲ್ಲಿ ಆಹ್ವಾನಿಸಲಾದ ಟೆಂಡರಿನ ದಿನಾಂಕಗಳನ್ನು ಈ ಕೆಳಗಿನಂತೆ ಮುಂದೂಡಲಾಗಿದೆ.

**ಕಾಮಗಾರಿಯ ವಿವರಣೆ**

| ಅ.ನಂ | ಕೆಲಸದ ಹೆಸರು |
|---|---|
| 1 | ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾ. ಮತ್ತಿವಾಡ ಗ್ರಾಮದ ಹತ್ತಿರ ಸ.ನೀ. ಕೆರೆ ನಿರ್ಮಾಣ |
| 2 | ಬೆಳಗಾವಿ ಜಿಲ್ಲೆಯ ರಾಮದುರ್ಗ ತಾ. ಹೂವಿನಹಳ್ಳಿಕ್ಕೆ ಅಡ್ಡವಾಗಿ ರಾಮದುರ್ಗದ ಹತ್ತಿರ ಸ.ನೀ. ಕೆರೆ ನಿರ್ಮಾಣ |

1. ಸದರಿ ಕಾಮಗಾರಿಗಳ ಟೆಂಡರ್ ಫಾರ್ಮಗಳಿಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ :
2. ಖುಲ್ಲಾ ಟೆಂಡರ್ ಫಾರ್ಮಗಳನ್ನು ನೀಡುವ ದಿನಾಂಕ :
3. ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ :

} ಮುಂದಿನ ಆದೇಶದವರೆಗೆ ಮುಂದೂಡಲಾಗಿದೆ.

(ಸಾಧ್ಯವಾದಲ್ಲಿ ದಿನಾಂಕ: - ಟೆಂಡರ್‌ಗಳನ್ನು ತೆರೆಯಲಾಗುವುದು).

**ಬಾಕಿ ಉಪವಿಧಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.**

**ಮನೋಹರ. ರಾ. ವಡ್ಡರ**
ಕಾರ್ಯನಿರ್ವಾಹಕ ಇಂಜಿನೀಯರ್,
ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

ಪಿ.ಆರ್. 254

**ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯನಿರ್ವಾಹಕ ಅಭಿಯಂತರರ ಕಚೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.**

**ಟೆಂಡರ್**

**ಅವಧಿ ವಿಸ್ತರಣೆ (ದ್ವಿಲಕೋಟೆ ಪದ್ದತಿ)**

**ಕ್ರ.ಸಂ.ಸನೀವಿ / ಬೆಳಗಾವಿ / ಜೆ.ಇ. / ಟೆಂಡರ್ / 06-07 / 1158, ದಿನಾಂಕ: 05ನೇ ಮೇ 2006.**

ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂ: ಸ ನೀ ವಿ / ಬೆಳಗಾಂವಿ / ಜೀಇ / ಟೆಂಡರ್ / 05-06 / 432 ದಿನಾಂಕ: 17.02.2006 ರಲ್ಲಿ ಆಹ್ವಾನಿಸಲಾದ ಟೆಂಡರಿನ ದಿನಾಂಕಗಳನ್ನು ಈ ಕೆಳಗಿನಂತೆ ಮುಂದೂಡಲಾಗಿದೆ.

**ಕಾಮಗಾರಿ ಹೆಸರು : ಬೆಳಗಾಂವಿ ಜಿಲ್ಲೆಯ ಖಾನಾಪುರ ತಾ. ದೇವಾಚಿಹಟ್ಟಿ ಗ್ರಾಮದ ಹತ್ತಿರ ಮಲಪ್ರಭಾ ನದಿಗೆ ಅಡ್ಡವಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ.**

1. ಸದರಿ ಕಾಮಗಾರಿಗಳ ಟೆಂಡರ್ ಫಾರ್ಮಗಳಿಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ :
2. ಖುಲ್ಲಾ ಟೆಂಡರ್ ಫಾರ್ಮಗಳನ್ನು ನೀಡುವ ದಿನಾಂಕ :
3. ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ :

} ಮುಂದಿನ ಆದೇಶದವರೆಗೆ ಮುಂದೂಡಲಾಗಿದೆ.

(ಸಾಧ್ಯವಾದಲ್ಲಿ ದಿನಾಂಕ: - ಟೆಂಡರ್‌ಗಳನ್ನು ತೆರೆಯಲಾಗುವುದು).

**ಬಾಕಿ ಉಪವಿಧಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.**

**ಮನೋಹರ. ರಾ. ವಡ್ಡರ**
ಕಾರ್ಯನಿರ್ವಾಹಕ ಇಂಜಿನೀಯರ್,
ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

ಪಿ.ಆರ್. 256

**ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯನಿರ್ವಾಹಕ ಅಭಿಯಂತರರ ಕಚೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.**

**ಟೆಂಡರ್**

**ಅವಧಿ ವಿಸ್ತರಣೆ (ದ್ವಿಲಕೋಟೆ ಪದ್ದತಿ)**

**ಕ್ರ.ಸಂ.ಸನೀವಿ / ಬೆಳಗಾವಿ / ಜೆ.ಇ. / ಟೆಂಡರ್ / 06-07 / 1159, ದಿನಾಂಕ: 05ನೇ ಮೇ 2006.**

ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂ: ಸ ನೀ ವಿ / ಬೆಳಗಾಂವಿ / ಜೀಇ / ಟೆಂಡರ್ / 05-06 / 435 ದಿನಾಂಕ: 18.02.2006 ರಲ್ಲಿ ಆಹ್ವಾನಿಸಲಾದ ಟೆಂಡರಿನ ದಿನಾಂಕಗಳನ್ನು ಈ ಕೆಳಗಿನಂತೆ ಮುಂದೂಡಲಾಗಿದೆ.

**ಕಾಮಗಾರಿ ಹೆಸರು : ಬೆಳಗಾಂವಿ ಜಿಲ್ಲೆಯ ಚಿಕ್ಕೋಡಿ ತಾ. ಬೂದಿಹಾಳ ಗ್ರಾಮದ ಹತ್ತಿರ ಚಿಕೋತ್ರಾ ನದಿಗೆ ಅಡ್ಡವಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ.**

1. ಸದರಿ ಕಾಮಗಾರಿಗಳ ಟೆಂಡರ್ ಫಾರ್ಮಗಳಿಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ :
2. ಖುಲ್ಲಾ ಟೆಂಡರ್ ಫಾರ್ಮಗಳನ್ನು ನೀಡುವ ದಿನಾಂಕ :
3. ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ :

} ಮುಂದಿನ ಆದೇಶದವರೆಗೆ ಮುಂದೂಡಲಾಗಿದೆ.

(ಸಾಧ್ಯವಾದಲ್ಲಿ ದಿನಾಂಕ: - ಟೆಂಡರ್‌ಗಳನ್ನು ತೆರೆಯಲಾಗುವುದು).

**ಬಾಕಿ ಉಪವಿಧಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.**

**ಮನೋಹರ. ರಾ. ವಡ್ಡರ**
ಕಾರ್ಯನಿರ್ವಾಹಕ ಇಂಜಿನೀಯರ್,
ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

ಪಿ.ಆರ್. 257

